# ಡಾ. ಎಚ್. ನರಸಿಂಹಯ್ಯ



ಅಶೋಕ ಕುಮಾರ ರಂಜೇರೆ



ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೨೧

# ಡಾ. ಎಚ್. ನರಸಿಂಹಯ್ಯ

ಅಶೋಕ ಕುಮಾರ ರಂಜೇರೆ




ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ.

Dr. H. Narasimhaiah : By Ashoka Kumar Rangere, Published by Dr. Karigowda Beechanahalli, Director, prasaranga, Kannada University, Hampi, Vidyaranya, Kamalálpura 583221.
PP : VIII + 32  Rs 10/-

First edition 1995.

ನಮ್ಮವರು ಪುಸ್ತಕ ಮಾಲೆ ೮



**ಪ್ರಕಾಶಕರು**
ಡಾ. ಕರೀಗೌಡ ಬೀಚನಹಳ್ಳಿ
ನಿರ್ದೇಶಕರು, ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ, ಕಮಲಾಪುರ-೫೮೩ ೨೨೧.

ಬೆಲೆ : ಹತ್ತು ರೂಪಾಯಿಗಳು

**ಮುದ್ರಕರು**
ವಿನಾಯಕ ಆಫ್‌ಸೆಟ್ ಪ್ರಿಂಟರ್ಸ್
8/2, ಮಾರೇನಹಳ್ಳಿ, ಮೊದಲ ಅಡ್ಡ ರಸ್ತೆ,
23ನೇ ಮುಖ್ಯ ರಸ್ತೆ, ಬೆಂಗಳೂರು - 560 078
ದೂರವಾಣಿ : 642102

# ನಿಮ್ಮೊಡನೆ

ಹಂಪಿಯ ಕನ್ನಡ ವಿಶ್ವವಿದ್ಯಾಲಯ ವಿದ್ಯೆಯನ್ನು ಕಲಿಯಲು ಅನುವು ಮಾಡಿಕೊಡುವ ಒಂದು ಸಂಸ್ಥೆಯೇ ಹೊರತು, ಅದು ವಿದ್ಯೆಯನ್ನು ಕಲಿಸುವ ಸಂಸ್ಥೆಯಲ್ಲ. ಒಂದು ದೃಷ್ಟಿಯಿಂದ ಇದು ವಿದ್ಯೆಯನ್ನು ನಿರ್ಮಿಸುವ ಸಂಸ್ಥೆಯಾಗಿದೆ. ನಮ್ಮ ದೇಶದಲ್ಲಿ ಹಳೆಯ ಕಾಲದ ತಿಳುವಳಿಕೆಯೊಂದಿದೆ, ಅಲ್ಲದೇ ಪಶ್ಚಿಮದಿಂದ ಹರಿದು ಬರುತ್ತಿರುವ ಜ್ಞಾನಪ್ರವಾಹವೂ ಇದೆ. ಈ ಎರಡೂ ತಿಳುವಳಿಕೆಗಳು ಒಂದಕ್ಕೊಂದು ಸಂಧಿಸಿ, ಬೆಳಕನ್ನು ಉಂಟು ಮಾಡಿವೆ, ಜೊತೆಗೆ ದಿಗ್ಭ್ರಮೆಯನ್ನೂ ತಂದಿವೆ. ಈ ತಿಳುವಳಿಕೆಗಳ ವಿವೇಕದ ವಿನಿಯೋಗ ಇಂದು ಅಗತ್ಯವಾಗಿದೆ. ಇಂಥ ವಿನಿಯೋಗಕ್ಕಾಗಿ ಹೊಸಬಗೆಯ ಶಾಸ್ತ್ರ ವಿಧಾನಗಳು ನಮಗಿಂದು ಬೇಕಾಗಿವೆ. ಕನ್ನಡ ವಿಶ್ವವಿದ್ಯಾಲಯದಲ್ಲಿ ನಡೆಯುತ್ತಿರುವ ಸಂಶೋಧನೆಯ ಗುರಿಯೆಂದರೆ ಈ ಶಾಸ್ತ್ರವಿಧಾನಗಳ ನಿರ್ಮಾಣ. ಈ ಬಗೆಯ ಶಾಸ್ತ್ರ-ಕಲೆ, ಅಭಿಜಾತ- ಜಾನಪದ, ಮಾರ್ಗ-ದೇಸಿ, ಸ್ವಕೀಯ-ಪರಕೀಯ, ಪೌರ್ವಾತ್ಯ-ಪಾಶ್ಚಾತ್ಯ ಈ ಬಗೆ ದ್ವಂದ್ವಗಳ ಸಾಮರಸ್ಯ ಮತ್ತು ಸಂಘರ್ಷಗಳ ಒಡಲಿನಲ್ಲಿ ಹುಟ್ಟಿಬರುವ ತಿಳುವಳಿಕೆಯನ್ನು ಹಿಡಿದುಕೊಂಡು ಕನ್ನಡದಲ್ಲಿ ಅದಕ್ಕೆ ಅಭಿವ್ಯಕ್ತಿಯನ್ನು ಕೊಡಬೇಕಾಗಿದೆ. ಭಾಷೆಯಲ್ಲಿ ಮೂಡಿ ಬರುವ ತಿಳುವಳಿಕೆ ಮಾತ್ರ ಉಪಯುಕ್ತವಾಗಬಲ್ಲದು. ಅನುವಾದ, ಭಾಷಾಂತರ, ವಿವರಣೆ, ಟೀಕೆ, ವಿಮರ್ಶೆ ಇಂಥ ವಿಧಾನಗಳನ್ನು ಅನುಸರಿಸುತ್ತ ತಿಳುವಳಿಕೆಯ ಹೊಸ ಸಾಹಿತ್ಯ ನಿರ್ಮಾಣವಾಗಬೇಕು. ಅಂಥ ಎಲ್ಲ ಬಗೆಯ ಸಂಶೋಧನಕ್ಕೂ ಕನ್ನಡ ವಿಶ್ವವಿದ್ಯಾಲಯದಲ್ಲಿ ಅನುಕೂಲವಿದೆ, ಅವಕಾಶವೂ ಇದೆ.

ಹೀಗೆ ಮೂಡಿ ಬಂದ ಸಾಹಿತ್ಯ ಪ್ರಕಟವಾಗಬೇಕು. ನಮ್ಮ ವಿಶ್ವವಿದ್ಯಾಲಯದ ಪ್ರಸಾರಾಂಗಕ್ಕೆ ಇಂಥ ಗುರುತರವಾದ ಜವಾಬ್ದಾರಿಯಿದೆ. ವಿದ್ಯೆಯ ಸೃಷ್ಟಿಯಾಗುವುದು ಈ ಪ್ರಸಾರಾಂಗದಲ್ಲಿ. ನಾಡಿನ ತಜ್ಞರಿಂದ ಗ್ರಂಥಗಳನ್ನು ಬರೆಯಿಸಿ ಪ್ರಕಟಿಸುವುದರ ಜೊತೆಗೆ, ವಿಶ್ವವಿದ್ಯಾಲಯ ಸೃಷ್ಟಿಸುತ್ತಿರುವ ಸಾಹಿತ್ಯವನ್ನೂ ಅದು ಪ್ರಕಟಿಸಬೇಕು. ಇದು ತಿಳುವಳಿಕೆಗೆ ಪರಿಪ್ರೇಕ್ಷ್ಯವನ್ನು ಕಟ್ಟುವ ಕೆಲಸ. ನಾಡಿನ ಪ್ರಕೃತಿಯಂತೆ ನಾಡಿನ ಸಂಸ್ಕೃತಿ ಕೂಡ ಈ ಪರಿಪ್ರೇಕ್ಷ್ಯವಿಲ್ಲದೆ ತನ್ನ ಅರ್ಥವನ್ನು ಕಳೆದುಕೊಳ್ಳುತ್ತಿದೆ. ಕಲ್ಲಿನಲ್ಲಿರುವ ಶಾಸನಗಳನ್ನು ಕಣ್ಣೆತ್ತಿ ನೋಡದ ಜನ ಅದೇ ಪುಸ್ತಕದಲ್ಲಿ ಪ್ರಕಟಗೊಂಡರೆ ಓದುತ್ತಾರೆ, ಅರ್ಥ ಮಾಡಿಕೊಳ್ಳುತ್ತಾರೆ. ಜನರಾಡುವ ಶಬ್ದಗಳನ್ನೇ ಕೋಶದಲ್ಲಿ ಸಂಗ್ರಹಿಸಿದರೆ ಆ ಶಬ್ದಗಳಿಗೆ ತಿಳುವಳಿಕೆಯ ಬೆಲೆ ಬರುತ್ತದೆ.

ನಮ್ಮ ಪ್ರಸಾರಾಂಗ, ಈಗಾಗಲೇ ಕೆಲವು ಪುಸ್ತಕಗಳನ್ನು ಪ್ರಕಟಿಸಿದೆ. ಪ್ರಸಾರಾಂಗ, ತನ್ನ ಪ್ರಕಟಣೆಗಳ ಮೂಲಕ ಸಾರ್ಥಕವಾಗಬೇಕಾದ ದಾರಿಯನ್ನು ಹುಡುಕಿಕೊಳ್ಳುತ್ತಿದೆ. ಲೋಕದಲ್ಲಿಯ ತಿಳುವಳಿಕೆಯನ್ನು ಸಂಗ್ರಹಿಸಿ ತಿರುಗಿ ಲೋಕಕ್ಕೇ ದಾನ ಮಾಡುವ ಪ್ರಕ್ರಿಯೆ ಪ್ರಸಾರಾಂಗದಲ್ಲಿ ನಡೆಯುತ್ತಿದೆ. ಸಂಗ್ರಹವಾದ ತಿಳುವಳಿಕೆಗೆ ಗ್ರಂಥಗಳ ರೂಪವನ್ನು ಕೊಡುವ ಹೊಣೆಗಾರಿಕೆ ಪ್ರಸಾರಾಂಗದ್ದಾಗಿದೆ. ಈ ರೂಪಾಂತರದ ಪ್ರಕ್ರಿಯೆ ನಮ್ಮ ವಿಶ್ವವಿದ್ಯಾಲಯದ ವೈಶಿಷ್ಟ್ಯವಾಗಿದೆ.

ನಾವು ನಮ್ಮ ನಮ್ಮಲ್ಲಿ ವಿಚಾರ ವಿನಿಮಯ ನಡೆಯಲು, ಒಬ್ಬರ ಅರಿವನ್ನು ಎಲ್ಲರೂ ಹಂಚಿಕೊಳ್ಳಲು, ವಿಶ್ವವಿದ್ಯಾಲಯದಲ್ಲಿ ಪ್ರತಿವಾರ ಮಂಟಪವೆಂಬ ಕಾರ್ಯಕ್ರಮ ನಡೆಸುತ್ತೇವೆ. ಅಲ್ಲಿ ಹೊಮ್ಮಿದ ವಿಚಾರಗಳು ನಮ್ಮ ಅರಿವನ್ನು ಹೆಚ್ಚಿಸಿದಂತೆ ನಿಮಗೂ ಲಾಭದಾಯಕವಾಗುವವೆಂಬ ನಂಬಿಕೆಯಿಂದ ಕಿರುಪುಸ್ತಿಕೆಗಳ ರೂಪದಲ್ಲಿ ನಿಮ್ಮ ಕೈಗಿಡುತ್ತಿದ್ದೇವೆ.

**ಚಂದ್ರಶೇಖರ ಕಂಬಾರ**
ಕುಲಪತಿಗಳು

## ಪರಿವಿಡಿ

# ಡಾ. ಎಚ್. ನರಸಿಂಹಯ್ಯ

ಪ್ರಪಂಚದಲ್ಲಿ ಕೋಟಿ ಕೋಟಿ, ಬಿಲಿಯನ್‌ಗಟ್ಟಲೆ ಜನರು ಜೀವಿಸಿ ಕಣ್ಮರೆಯಾಗಿದ್ದಾರೆ. ಆದರೆ ಅವರಲ್ಲಿ ಕೆಲವರನ್ನು ಮಾತ್ರ ಇತಿಹಾಸದುದ್ದಕ್ಕೂ ಗುರುತಿಸುತ್ತ ಬಂದಿದ್ದೇವೆ. ಏಕೆಂದರೆ ಅವರು ವಿಶೇಷವಾದ, ವಿಶಿಷ್ಟವಾದ ಜೀವನ ಸಾಧನೆಗಳನ್ನು ಮಾಡಿರುವುದರಿಂದ. ಇದು ಕನ್ನಡನಾಡಿಗೂ ಅನ್ವಯಿಸುತ್ತದೆ. ಕರ್ನಾಟಕದಲ್ಲೂ ಲಕ್ಷ ಲಕ್ಷ ಜನರು ಬಾಳಿ ಹೋಗಿದ್ದಾರೆ' ಮತ್ತು ಈಗಲೂ ಐದು ಕೋಟಿಯಷ್ಟು ಜನ ಕನ್ನಡಿಗರು ಜೀವಿಸುತ್ತಿದ್ದಾರೆ ಇವರಲ್ಲಿ ವಿಶೇಷವಾಗಿ, ಸಮಾಜಸೇವೆ ಮಾಡಿದ, ಮಾಡುತ್ತಿರುವ ಆದರ್ಶವಾದ ಜೀವನವನ್ನು ನಡೆಸಿದ ಮತ್ತು ನಡೆಸುತ್ತಿರುವ ಕೆಲವೇ ಅಪರೂಪದ ವ್ಯಕ್ತಿಗಳಲ್ಲಿ ಡಾ. ಎಚ್. ನರಸಿಂಹಯ್ಯನವರೂ ಕೂಡ ಒಬ್ಬರು.

ಎಪ್ಪತ್ನಾಲ್ಕು ವರ್ಷ ವಯಸ್ಸಿನ ನರಸಿಂಹಯ್ಯನವರು ಪ್ರಸ್ತುತ ನ್ಯಾಷನಲ್ ಎಜುಕೇಷನ್ ಸೊಸೈಟಿಯ ಅಧ್ಯಕ್ಷರು. ತಮ್ಮ ವಿದ್ಯಾರ್ಥಿ ಜೀವನಕ್ಕಾಗಿ ೧೯೩೪ರಲ್ಲಿ ನ್ಯಾಷನಲ್ ಹೈಸ್ಕೂಲು ಸೇರಿದಾಗಿನಿಂದ ಇಂದಿನವರೆಗೆ ಒಂದಿಲ್ಲ ಒಂದು ರೀತಿಯಲ್ಲಿ ನ್ಯಾಷನಲ್ ವಿದ್ಯಾಸಂಸ್ಥೆಯ ಒಡನಾಡಿಯಾಗಿಯೇ ಬದುಕಿದ್ದಾರೆ, ಮತ್ತು ಈಗಲೂ ಬದುಕುತ್ತಿದ್ದಾರೆ. ತಮ್ಮ ಜೀವನದ ಬಹುಪಾಲು ಸಮಯ ಈ ವಿದ್ಯಾಸಂಸ್ಥೆಗಾಗಿಯೇ ಮುಡುಪಾಗಿಟ್ಟಿದ್ದಾರೆ. ಪ್ರಾಥಮಿಕ ಹಂತದ ವಿದ್ಯಾರ್ಥಿ ಜೀವನದಿಂದಲೇ ಖಾದಿಧಾರಿಗಳಾದ ನರಸಿಂಹಯ್ಯನವರು ಗಾಂಧಿವಾದಿಗಳು ಮತ್ತು ಅದಕ್ಕಿಂತ ಮುಖ್ಯವಾಗಿ ವೈಚಾರಿಕ ಮನೋಭಾವ ಉಳ್ಳ ವಿಚಾರವಾದಿಗಳು. ತಮ್ಮ ಸ್ವಪ್ರತಿಭೆಯಿಂದಲೇ ಹಂತ ಹಂತವಾಗಿ ಉನ್ನತ ಸ್ಥಾನಕ್ಕೆ ಮೇಲೇರುತ್ತ ಬಂದವರು. ಹಿಂದುಳಿದ ಬಡ ಕುಟುಂಬದಿಂದ ಬಂದು ಅಕಸ್ಮಾತ್ ನ್ಯಾಷನಲ್ ಹೈಸ್ಕೂಲ್ ಸೇರಿ, ಮುಂದೆ ತಮ್ಮ ಜೀವನದಲ್ಲಿ ಎದುರಿಸಿದ ಎಲ್ಲ ಪರೀಕ್ಷೆಗಳಲ್ಲೂ ಪ್ರಥಮ ಶ್ರೇಣಿಯಲ್ಲಿ ಪಾಸಾದವರು. ಎಂ.ಎಸ್‌ಸಿ. ಮುಗಿಸಿ ನ್ಯಾಷನಲ್ ಕಾಲೇಜಿನಲ್ಲೇ ಅಧ್ಯಾಪಕರಾಗಿ, ವಿದ್ಯಾರ್ಥಿಗಳಿಗೆ ಅನೇಕ ರೀತಿಯಲ್ಲಿ ಮಾರ್ಗದರ್ಶಕರಾಗಿ ಸಾವಿರಾರು ವಿದ್ಯಾರ್ಥಿಗಳ ಏಳಿಗೆಗಾಗಿ ದುಡಿದವರು. ಇಂದು ಬೆಂಗಳೂರು, ಗೌರಿಬಿದನೂರು, ಬಾಗೇಪಲ್ಲಿಗಳಲ್ಲಿ ನಾಲ್ಕು ಕಾಲೇಜುಗಳನ್ನು, ಬೆಂಗಳೂರು ಹೊಸೂರುಗಳಲ್ಲಿ ಹೈಸ್ಕೂಲುಗಳನ್ನು, ಪ್ರಾಥಮಿಕ ಶಾಲೆಗಳನ್ನು ಯಶಸ್ವಿಯಾಗಿ ನಡೆಸುತ್ತಿದ್ದಾರೆ. ಇಲ್ಲಿನ ಎಲ್ಲ ಶಾಲಾ

ಕಾಲೇಜುಗಳಲ್ಲಿ ಪುಟಾಣಿಗಳಿಂದ ಪದವಿ ತರಗತಿಗಳ ಯುವಕರವರೆಗೆ ಮತ್ತು ಅಧ್ಯಾಪಕರಿಗೆಲ್ಲ ಎಚ್. ಎನ್. ಎಂದೇ ಪರಿಚಿತರು.

ಡಾ. ಎಚ್. ನರಸಿಂಹಯ್ಯನವರು ೧೯೭೨ ರಿಂದ ೭೭ರ ವರೆಗೆ ಬೆಂಗಳೂರು ವಿಶ್ವವಿದ್ಯಾಲಯದ ಕುಲಪತಿಗಳೂ ಆಗಿದ್ದರು. ಕರ್ನಾಟಕ ರಾಜ್ಯ ವಿಧಾನ ಪರಿಷತ್ತಿನ ಸದಸ್ಯರೂ ಆಗಿದ್ದರು. ಶಿಕ್ಷಣ ಮತ್ತು ವಿಜ್ಞಾನ ಕ್ಷೇತ್ರದಲ್ಲಿ ಗಣನೀಯ ಸೇವೆ ಸಲ್ಲಿಸುತ್ತಿರುವ ಇವರು ಅಮೆರಿಕದಂಥ ಪ್ರತಿಷ್ಠಿತ ರಾಷ್ಟ್ರದಲ್ಲಿ ಭೌತಶಾಸ್ತ್ರ ವಿಷಯ ಕುರಿತು ಪಿಎಚ್.ಡಿ ಪದವಿ ಪಡೆದುಕೊಂಡರು. ನಂತರ ಅದೇ ದೇಶದ ವಿಶ್ವವಿದ್ಯಾಲಯದಲ್ಲಿ ಸಂದರ್ಶಕ ಪ್ರಾಧ್ಯಾಪಕರಾಗಿ ನೇಮಕಗೊಂಡಿದ್ದರು. ಹೀಗೆ ತಮ್ಮ ಜೀವನ ಪರ್ಯಂತ ನಿರಂತರ ಕಾರ್ಯಪ್ರವೃತ್ತರಾಗಿ ದುಡಿಯುತ್ತಿರುವ ಎಚ್ಚೆನ್ ಅವರು ಸರಳ ಜೀವಿ. ಆಡಂಬರದ, ಬಣ್ಣದ ಬದುಕಿನಿಂದ ಬಹಳ ದೂರ ಉಳಿದು ಸಮಾಜಕ್ಕೆ, ನಮ್ಮೆಲ್ಲರಿಗೆ ಆದರ್ಶವ್ಯಕ್ತಿ ಆಗಿದ್ದಾರೆ. ಈಗಲೂ ಡಾ. ಎಚ್. ಎನ್. ಅವರ ಕೋಣೆಗೆ (ನ್ಯಾಷನಲ್ ಕಾಲೇಜು ಹಾಸ್ಟೆಲಿನ ಒಂದು ಕೋಣೆ ) ಹೋದರೆ ಯಾರಿಗಾದರೂ ಅತ್ಯಾಶ್ಚರ್ಯವಾಗುತ್ತದೆ.

ನಮ್ಮ ಸುತ್ತಮುತ್ತಲು ರಾಜಕಾರಣಿಗಳು, ಸಮಾಜ ಸೇವಕರೆಂದು ಮುಖವಾಡ ಹಾಕಿಕೊಂಡ ವ್ಯಕ್ತಿಗಳು ಹಾಗೂ ಇನ್ನು ಅನೇಕರು ಆದರ್ಶದ ಮಾತುಗಳನ್ನು ಆಡುತ್ತಲೇ ಇದ್ದಾರೆ, ಬರವಣಿಗೆ ಮೂಲಕ ತಿಳಿಸುತ್ತಿದ್ದಾರೆ. ಆದರೆ ಅವರ ಭಾಷಣ, ಬರವಣಿಗೆಗೆ ಮತ್ತು ವಾಸ್ತವದ ಅವರ ಜೀವನಕ್ಕೆ ತಾಳೆಯೇ ಇರುವುದಿಲ್ಲ. ಅವರು ಹೊಟ್ಟೆಪಾಡಿಗಾಗಿ, ಸ್ವಾರ್ಥಕ್ಕಾಗಿ ಇದನ್ನೆಲ್ಲ ಮಾಡುತ್ತಿದ್ದಾರೆ. ನಿಜವಾದ ಜೀವನದಲ್ಲಿ ತಮ್ಮ ಭಾಷಣ, ಬರವಣಿಗೆಗಿಂತ ಭಿನ್ನವಾಗಿ ಬದುಕುತ್ತಿದ್ದಾರೆ, ''ಶಾಸ್ತ್ರ ಹೇಳುವುದಕ್ಕೆ, ಬದನೆಕಾಯಿ ತಿನ್ನುವುದಕ್ಕೆ'' ಎನ್ನುವ ಗಾದೆ ಮಾತಿನಂತೆ. ಆದರೆ ಎಚ್. ಎನ್. ಇದಕ್ಕೆ ಅಪವಾದ. ಇವರು ನುಡಿದಂತೆ ನಡೆಯುವ, ನಡೆದಂತೆ ನುಡಿಯುತ್ತಿರುವ ಮನುಷ್ಯರು. ತಮ್ಮ ಪ್ರತಿಭೆ, ಪರಿಶ್ರಮ ಮತ್ತು ಶ್ರದ್ಧೆಯ ತಳಹದಿ ಮೇಲೆ ರೂಪುಗೊಂಡ ಸಾರ್ಥಕ ಮೂರ್ತಿ. ನಾಡಿನ ಪ್ರಮುಖ ಶಿಕ್ಷಣ ತಜ್ಞರೂ ಗಾಂಧಿವಾದಿಗಳೂ ಮಾನವೀಯ ಸಮಾಜ ಸುಧಾರಕರೂ ಆಗಿದ್ದಾರೆ. ತಮ್ಮ ನಿರಂತರ ದುಡಿಮೆ ಪರಿಶ್ರಮದಿಂದ ನಾಡಿನ ಜನರಿಗೆ ಮಾದರಿಯಾಗಿದ್ದಾರೆ. ಇಂಥವರ ಜೀವನ, ಸಾಧನೆ ಕುರಿತು ಬರೆಯುವುದೇ ಒಂದು ಹೆಮ್ಮೆಯ ವಿಷಯ. ಇಂದಿನ ಹದಗೆಟ್ಟ ಸಮಾಜದಲ್ಲಿನ ಸ್ವಾರ್ಥ, ಲಂಪಟ ಜನರಿಗೆ ಡಾ. ಎಚ್.ಎನ್. ಅವರ ಸಾರ್ಥಕ ಮತ್ತು ಆದರ್ಶ ಜೀವನ, ವೈಚಾರಿಕ ಬರಹಗಳ ಪರಿಚಯ ಮಾಡಿಕೊಡುವುದು ಆಗಲೇಬೇಕಾದ ಕೆಲಸವಾಗಿದೆ.

ಈ ಹಿನ್ನೆಲೆಯಲ್ಲಿ ಡಾ. ಎಚ್. ನರಸಿಂಹಯ್ಯ (ಎಚ್.ಎನ್.) ಅವರ ಜೀವನದ ಪರಿಚಯ, ಬರಹಗಳ ಸೂಕ್ಷ್ಮ ನೋಟ ನೀಡುವುದು, ಮತ್ತು ಅವರ ಚಿಂತನೆಗಳನ್ನು ವಿವರಿಸುವುದು ಇಲ್ಲಿನ ಮುಖ್ಯವಾದ ಉದ್ದೇಶ.

## ಹುಟ್ಟು, ಬಾಲ್ಯ ಮತ್ತು ವಿದ್ಯಾಭ್ಯಾಸ

ಡಾ. ಎಚ್. ನರಸಿಂಹಯ್ಯನವರು ಕೋಲಾರ ಜಿಲ್ಲೆಯ ಗೌರಿಬಿದನೂರು ತಾಲೂಕಿನ ಕುಗ್ರಾಮವಾದ ಹೊಸೂರಿನಲ್ಲಿ ೧೯೨೦, ಜೂನ್ ೬ ರಂದು ಹುಟ್ಟಿದರು. ತಂದೆ ಹನುಮಂತಪ್ಪ, ತಾಯಿ ವೆಂಕಟಮ್ಮನವರು. ಹಿಂದುಳಿದ ಒಂದು ಬಡ ಕುಟುಂಬ ಇವರದು. ಇವರಿಗೆ ಯಾವುದೇ ಆಸ್ತಿಪಾಸ್ತಿ ಇರಲಿಲ್ಲ. ಆದ್ದರಿಂದ ಜೀವನೋಪಾಯಕ್ಕಾಗಿ ಹನುಮಂತಪ್ಪ ಕೂಲಿ ಮೇಷ್ಟ್ರಾಗಿ ಕೆಲಸ ಮಾಡುತ್ತಿದ್ದರು. ಇದು ಸರಕಾರಿನೌಕರಿ ಅಲ್ಲ. (ಖಾಸಗಿಯಾಗಿ ಕೆಲವು ಮಕ್ಕಳಿಗೆ ಪಾಠ ಹೇಳಿಕೊಟ್ಟು ಅವರ ಪೋಷಕರಿಂದ ಅದಕ್ಕೆ ಪ್ರತಿಯಾಗಿ ದವಸ ಧಾನ್ಯ ಪಡೆದು ಕೊಳ್ಳುವುದು.) ಹನುಮಂತಪ್ಪ ಇಂಥ ಕೂಲಿ ಮೇಷ್ಟ್ರಾಗಿ ಕೆಲಸ ಮಾಡಿ ಬಂದ ಆದಾಯದಲ್ಲಿ ಜೀವನ ಮಾಡುತ್ತಿದ್ದರು. ಗಂಡ ಕೂಲಿ ಮೇಷ್ಟ್ರಾಗಿ ದುಡಿಯುತ್ತಿದ್ದರೆ, ಆತನ ಸಹಾಯಕ್ಕಾಗಿ, ತಮ್ಮ ಜೀವನಕ್ಕೆ ಒಂದಿಷ್ಟು ಉಪಯೋಗವಾಗಬಹುದೆಂದು ಹೆಂಡತಿ ವೆಂಕಟಮ್ಮ ಕೂಡ ಕೂಲಿ ನಾಲಿ ಕೆಲಸ ಮಾಡುತ್ತಿದ್ದರು. ಹೊಸೂರಿನಲ್ಲೇ ಖಾದಿ ಕೇಂದ್ರವೊಂದು ಇದ್ದು ಅದು ಕೋಲಾರ ಜಿಲ್ಲಾ ಬೋರ್ಡಿನ ಆಡಳಿತಕ್ಕೆ ಒಳಪಟ್ಟಿತ್ತು. ಹೊಸೂರಿನ ಮತ್ತು ಅದರ ಸುತ್ತಮುತ್ತಲಿನ ಬಡವರು ಖಾದಿ ಕೇಂದ್ರದ ಚರಕಾದಲ್ಲಿ ನೂಲು ತೆಗೆದು ಅಷ್ಟೋ ಇಷ್ಟೋ ಸಂಪಾದಿಸಿ ಜೀವನ ಮಾಡುತ್ತಿದ್ದರು. ಇಂಥವರಲ್ಲಿ ನರಸಿಂಹಯ್ಯನವರ ಅಮ್ಮ ವೆಂಕಟಮ್ಮ ಕೂಡ ಒಬ್ಬರು. ಇವರು (ವೆಂಕಟಮ್ಮ) ಬೇರೆ ಕೂಲಿ ಕೆಲಸಗಳೊಂದಿಗೆ ಖಾದಿ ಕೇಂದ್ರದಲ್ಲಿ ಹತ್ತಿಯ ಹಂಜಿಯನ್ನು ತೆಗೆದುಕೊಂಡು ಬಂದು ಅದನ್ನು ನೂಲು ಮಾಡಿ ಖಾದಿ ಕೇಂದ್ರಕ್ಕೆ ಒಪ್ಪಿಸಿ, ಬಂದ ಹಣವನ್ನು ತಮ್ಮ ಸಂಸಾರ ನಡೆಸಲು ಗಂಡನೊಂದಿಗೆ ವಿನಿಯೋಗಿಸುತ್ತಿದ್ದರು. ನರಸಿಂಹಯ್ಯನವರು ಇಂಥ ಮನೆಯ ವಾತಾವರಣದಲ್ಲಿ ಬೆಳೆದದ್ದರಿಂದ ಸಹಜವಾಗಿಯೇ ಖಾದಿ ಸಂಪರ್ಕ ಬೆಳೆಯಿತು. ಈ ಊರಿಗೆ ಖಾದಿ ಕೇಂದ್ರ ಬರಲು ಮುಖ್ಯ ಕಾರಣಕರ್ತರಾದ ತಮ್ಮೂರಿನ ಕನ್ನಡ ಮೇಷ್ಟ್ರಾದ ವೆಂಕಟಾಚಲಯ್ಯನವರೆಂದು ಎಚ್.ಎನ್. ಅವರೇ ಅನೇಕ ಕಡೆ ಪ್ರಸ್ತಾಪಿಸಿದ್ದಾರೆ. ಇವರಿಂದ ಪ್ರಾರಂಭವಾದ ತಮ್ಮೂರಿನ ಖಾದಿ ಕೇಂದ್ರದ ಸಂಪರ್ಕದೊಂದಿಗಿನ ಒಡನಾಟ ತಮ್ಮ ಮನೆಗೂ ಬಂತು. ಹಾಗಾಗಿ ನರಸಿಂಹಯ್ಯನವರು ಪ್ರಾಥಮಿಕ ಹಂತದಲ್ಲಿ ಓದುವಾಗಲೇ ಖಾದಿ ಧರಿಸಲು ಪ್ರಾರಂಭಿಸಿದರು. ಅಂದಿನಿಂದ ಇಂದಿನವರೆಗೆ ಖಾದಿಧಾರಿಗಳಾಗಿಯೇ ಇದ್ದಾರೆ.

ಹೀಗೆ ಬಹುಕಷ್ಟದಲ್ಲೇ ಸಂಸಾರ ಸಾಗಿಸುತ್ತಿದ್ದ ಹನುಮಂತಪ್ಪ ಮತ್ತು ವೆಂಕಟಮ್ಮ ದಂಪತಿಗಳಿಗೆ ಇಬ್ಬರು ಮಕ್ಕಳಾದರು. ೧೯೨೦ ರಲ್ಲಿ ನರಸಿಂಹಯ್ಯ, ನಂತರ ಗಂಗಮ್ಮ. ಬಡತನದ ಬೇಗೆಯಲ್ಲೆ ಜೀವನ ಸಾಗಿಸುತ್ತಿದ್ದ ಹನುಮಂತಪ್ಪ ದಂಪತಿಗಳಿಗೆ ತಮ್ಮ ಮಗನಿಗೆ ಚನ್ನಾಗಿ ಓದಿಸಬೇಕೆಂಬ ಹೆಬ್ಬಯಕೆ. ತಮ್ಮ ಕಷ್ಟ ಕಾರ್ಪಣ್ಯಗಳ ನಡುವೆಯೂ ಹೊಸೂರಿನಲ್ಲಿರುವ ಸ್ಕೂಲಿಗೆ ಸೇರಿಸಿದರು. ನರಸಿಂಹಯ್ಯನವರು ೧೯೩೫ರ ವರೆಗೆ ತಮ್ಮ ಪ್ರಾಥಮಿಕ ವಿದ್ಯಾಭ್ಯಾಸವನ್ನು ಹೊಸೂರಿನಲ್ಲೇ ಮುಗಿಸಿದರು.

ಇಡೀ ತಾಲೂಕಿನಲ್ಲಿ ಒಂದೇ ಒಂದು ಹೈಸ್ಕೂಲು ಇರಲಿಲ್ಲ. ಆದ್ದರಿಂದ ಹೈಸ್ಕೂಲಿಗಾಗಿ ಕೋಲಾರ ಅಥವಾ ಬೆಂಗಳೂರಿಗೆ ಹೋಗಬೇಕು. ನರಸಿಂಹಯ್ಯನವರ ತಂದೆ ತಾಯಿಗಳಿಗೆ ಮಗನನ್ನೂ ದೂರದ ಊರಿಗೆ ಕಳಿಸಿ ಓದಿಸುವಾಸೆಯಿದ್ದರೂ ಕಳಿಸುವ ಶಕ್ತಿ ಇರಲಿಲ್ಲ. ಒಂದೆಡೆ ಮಗನನ್ನು ಚೆನ್ನಾಗಿ ಓದಿಸಿ ಬುದ್ಧಿವಂತನನ್ನಾಗಿ ಮಾಡಬೇಕೆಂಬ ಮಹದಾಸೆ. ಮತ್ತೊಂದು ಕಡೆ ಕಿತ್ತು ತಿನ್ನುವ ಬಡತನ. ಹುಡುಗನ ಮತ್ತು ವೆಂಕಟಮ್ಮ ದಂಪತಿಗಳ ಆಸೆ ಈಡೇರುವುದು ಅಷ್ಟೊಂದು ಸುಲಭದ ಮಾತಾಗಿರಲಿಲ್ಲ. ವೆಂಕಟಮ್ಮ ಹನುಮಂತಪ್ಪ ದಂಪತಿಗಳ ಒಳ್ಳೆತನ, ಸರಳ ಜೀವನ ಮತ್ತು ಹುಡುಗನ ಬುದ್ಧಿವಂತಿಕೆ ಊರಿನ ಹಿರಿಯರ ಮನಗೆದ್ದಿತು. ಊರಿನ ಹಿರಿಯರು ಹುಡುಗನನ್ನು ಬೆಂಗಳೂರಿನ ಶಾಲೆಗೆ ಸೇರಿಸಲು ಯೋಚಿಸಿದರು. ಮತ್ತು ೧೯೩೫ರಲ್ಲಿ ನ್ಯಾಷನಲ್ ಹೈಸ್ಕೂಲಿಗೆ ಸೇರಿಸಿದರು. ಹುಡುಗ ತುಂಬ ಬಡವನಾಗಿದ್ದರಿಂದ ಇದೆ ಸ್ಕೂಲಿನ ಆವರಣದಲ್ಲಿದ್ದ ಉಚಿತ ವಿದ್ಯಾರ್ಥಿನಿಲಯ (Poor Boys Home) ದಲ್ಲಿ ಅವಕಾಶ ದೊರೆಯಿತು. ಇಲ್ಲಿ ಎಲ್ಲ ಉಚಿತವಾಗಿರುವುದರಿಂದ ೧೯೩೮ ರವರೆಗೆ ತಮ್ಮ ಹೈಸ್ಕೂಲನ್ನು ಮುಗಿಸಿದರು. ಎಸ್. ಎಸ್. ಎಲ್. ಸಿ.ಯಲ್ಲಿ ಪ್ರಥಮ ಶ್ರೇಣಿ ಫಲಿತಾಂಶ ಪಡೆದುಕೊಂಡರು. ಆಗ ನ್ಯಾಷನಲ್ ಹೈಸ್ಕೂಲಿನಲ್ಲಿ ಇಂಟರ್ ಮೀಡಿಯಟ್ ಇಲ್ಲದೇ ಇದ್ದುದರಿಂದ ಸೆಂಟ್ರಲ್ ಕಾಲೇಜಿಗೆ ಸೇರಬೇಕಾಯ್ತು. ಹಾಗಾಗಿ ನ್ಯಾಷನಲ್ ಹೈಸ್ಕೂಲಿನ ಆವರಣದಲ್ಲಿದ್ದ Poor Boys Home ಕೂಡ ಬಿಡಬೇಕಾಯ್ತು.

೧೯೩೮ರಲ್ಲಿ ಸೆಂಟ್ರಲ್ ಕಾಲೇಜಿನಲ್ಲಿ ಇಂಟರ್ ಮೀಡಿಯಟ್ ಓದಲು ಪ್ರಾರಂಭಿಸಿದಾಗ ಬಿ. ಕೆ. ಮರಿಯಪ್ಪ ಉಚಿತ ವಿದ್ಯಾರ್ಥಿನಿಲಯದಲ್ಲಿ ಆಶ್ರಯ ಪಡೆದು ಉತ್ತಮ ಶ್ರೇಣಿಯಲ್ಲಿ ಪಾಸಾದರು. ಇಡೀ ಕರ್ನಾಟಕಕ್ಕೆ ೧೨ನೇ ಸ್ಥಾನ, ಗಣಿತಶಾಸ್ತ್ರದಲ್ಲಿ ದ್ವಿತೀಯ ಸ್ಥಾನ ಪಡೆದುಕೊಂಡರು.

ನಂತರ ಬಿ.ಎಸ್‌ಸಿ. ಆನರ್ಸ್‌ಗೆ ಸೆಂಟ್ರಲ್ ಕಾಲೇಜಿನಲ್ಲೇ ಸೇರಿಕೊಂಡರು. ರಾಮಕೃಷ್ಣ ಸ್ಟೂಡೆಂಟ್ ಹೋಮ್‌ನಲ್ಲಿ ಉಚಿತ ಊಟ ವಸತಿ ದೊರೆಯಿತು. ಮೊದಲ ಎರಡು ವರ್ಷದ ಬಿ.ಎಸ್‌ಸಿ. ಆನರ್ಸ್ ಯಶಸ್ವಿಯಾಗಿಯೇ ಪೂರೈಸಿದರು. ಬಿ.ಎಸ್‌ಸಿ. ಆನರ್ಸ್‌ನ ಕೊನೆಯ ವರ್ಷ ಓದುತ್ತಿದ್ದಾಗ ೧೯೪೨ರಲ್ಲಿ 'ಕ್ವಿಟ್ ಇಂಡಿಯಾ ಚಳುವಳಿ' ಆರಂಭವಾಯಿತು. ಮಿಡ್ಲ್‌ಸ್ಕೂಲಿನಲ್ಲಿ ಇರುವಾಗಲೇ ಚರಕಾದಲ್ಲಿ ನೂಲುತ್ತಿದ್ದು ಖಾದಿಯನ್ನು ಹಾಕಲು ಪ್ರಾರಂಭಿಸಿದ್ದರು. ಅಷ್ಟೇ ಅಲ್ಲದೆ ಹಿಂದಿಯನ್ನು ಕಲಿತಿದ್ದರು. ಹೆಂಡದಂಗಡಿ ಮುಂದೆ ಪಿಕೆಟಿಂಗ್ ಕೂಡ ಮಾಡಿದ್ದರು. ಪ್ರಾಥಮಿಕ ವಿದ್ಯಾರ್ಥಿ ದಿನಗಳಿಂದಲೇ ತಮ್ಮ ಅಧ್ಯಾಪಕರಿಂದ ರಾಷ್ಟ್ರೀಯ ಮನೋಭಾವ ಬೆಳೆಸಿಕೊಂಡ ನರಸಿಂಹಯ್ಯನವರು ಬೆಂಗಳೂರಿಗೆ ಬಂದ ಮೇಲೆ ಗಾಂಧೀಜಿ, ನೆಹರು, ಪಟೇಲ, ಸುಭಾಸಚಂದ್ರ ಭೋಸ್ ಮುಂತಾದವರ ನೇರ ಭಾಷಣಗಳನ್ನು ಕೇಳುವ ಮೂಲಕ ಹಾಗೂ ದೈನಂದಿನ ಪತ್ರಿಕೆಗಳನ್ನು ಓದುವ ಮೂಲಕ ಸಾಕಷ್ಟು ಸ್ಫೂರ್ತಿ ಪಡೆದರು. 'ಕ್ವಿಟ್ ಇಂಡಿಯಾ ಚಳುವಳಿ'ಯಲ್ಲಿ ತಾವೂ ಕೂಡ ಏಕೆ ಭಾಗವಹಿಸಬಾರದು ಎಂಬ ತೀರ್ಮಾನಕ್ಕೆ ಅವರು ತಲುಪಿದರು.

ಡಾ. ನರಸಿಂಹಯ್ಯನವರೇ ತಮ್ಮ ಒಂದು ಲೇಖನದಲ್ಲಿ 'ಕ್ವಿಟ್ ಇಂಡಿಯಾ ಚಳುವಳಿ' ಕುರಿತು ಬರೆದಿದ್ದಾರೆ. ರಾಷ್ಟ್ರೀಯ ಮನೋಭಾವ ಹೊಂದಿದ ಅವರು ಕ್ವಿಟ್ ಇಂಡಿಯಾ ಚಳುವಳಿ ಪ್ರಾರಂಭವಾದಾಗ ಸಂಕಟಕ್ಕೆ ಸಿಲುಕಿದನ್ನು ವಿವರಿಸಿದ್ದಾರೆ. ಕ್ವಿಟ್ ಇಂಡಿಯಾ ಚಳುವಳಿಯಲ್ಲಿ ಭಾಗವಹಿಸಬೇಕು, ಭಾಗವಹಿಸಿದರೆ ವಿದ್ಯಾಭ್ಯಾಸ ನಿಂತುಹೋಗಿ ತನ್ನ ಭವಿಷ್ಯವೇ ಹಾಳಾಗುತ್ತದೆ ಎನ್ನುವ ಭಯ ಅವರಿಗಿತ್ತು. 'ವಿದ್ಯಾಭ್ಯಾಸ ಮುಂದುವರೆಸಬೇಕು. ಅದಕ್ಕೆ ಯಾವುದೇ ಧಕ್ಕೆಯಾಗಬಾರದು. ಇದು ತನ್ನ ಭವಿಷ್ಯದ ಪ್ರಶ್ನೆ ಎಂದು ಒಂದು ಮನಸ್ಸು ಯೋಚಿಸಿತು. ನನ್ನ ಭವಿಷ್ಯ ಏನೇ ಆಗಲಿ ದೇಶದ ಸ್ವಾತಂತ್ರ ಸಂಗ್ರಾಮದಲ್ಲಿ ಭಾಗವಹಿಸುವುದು ಪ್ರತಿಯೊಬ್ಬ ಪ್ರಜೆಯ ಕರ್ತವ್ಯ. ಆದ್ದರಿಂದ ಸ್ವಾರ್ಥ ಬಿಟ್ಟು 'ಕ್ವಿಟ್ ಇಂಡಿಯಾ ಚಳುವಳಿ'ಯಲ್ಲಿ ಭಾಗವಹಿಸಬೇಕೆಂದು ಮತ್ತೊಂದು ಮನಸ್ಸು'. ಕೊನೆಗೆ ಅವರ ಮನಸ್ಸು ಚಳುವಳಿ ಕಡೆಗೆ ತಿರುಗಿ ಕಾಲೇಜಿಗೆ ಶರಣು ಹೊಡೆದರು. ೧೯೪೨ ಆಗಸ್ಟ್ ೯ ರಿಂದ ಕಾಲೇಜಿಗೆ ಹೋಗಲಿಲ್ಲ. ಸಂಪೂರ್ಣವಾಗಿ ಕ್ವಿಟ್ ಇಂಡಿಯಾ ಚಳುವಳಿಯಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಬೆಂಗಳೂರು, ಮೈಸೂರು ಜೈಲಿನಲ್ಲಿದ್ದು ಹೊರಗೆ ಬಂದರು. ಮತ್ತೆ ಚಳುವಳಿ ಆರಂಭವಾದಾಗ ಪೂನಾಕ್ಕೆ ಹೋಗಿ ಪ್ರತಿಬಂಧಕಾಜ್ಞೆ ಮುರಿದು ಆಗಿನ ಪ್ರಸಿದ್ಧ ಯರವಾಡ ಜೈಲಿನಲ್ಲಿ ಐದು ತಿಂಗಳ ಕಾಲ ಕಠಿಣ ಶಿಕ್ಷೆ ಅನುಭವಿಸಿದರು. ೧೯೪೪ರಲ್ಲಿ ಬ್ರಿಟಿಷ್ ಸರಕಾರ ಗಾಂಧೀಜಿ, ಮತ್ತಿತರ ಪ್ರಮುಖರೊಂದಿಗೆ ಒಪ್ಪಂದ ಮಾಡಿಕೊಂಡು ಬಿಡುಗಡೆ ಮಾಡಿತು. ೧೯೪೪ನೇ ಸಾಲಿನಲ್ಲಿ ಚಳುವಳಿ ಸಂಪೂರ್ಣ ನಿಂತ ಮೇಲೆ ತಮ್ಮ ಮೂರನೇ ಬಿ. ಎಸ್‌ಸಿ ಆನರ್ಸ್ ಮುಂದುವರೆಸಲು ನಿರ್ಧರಿಸಿದರು. ಮತ್ತೆ ರಾಮಕೃಷ್ಣ ವಿದ್ಯಾರ್ಥಿ ಮಂದಿರದಲ್ಲಿ ಆಶ್ರಯ ಪಡೆದು ಪ್ರಥಮ ದರ್ಜೆಯಲ್ಲಿ ಆನರ್ಸ್ ಪದವಿ ಮುಗಿಸಿದರು.

ಸೆಂಟ್ರಲ್ ಕಾಲೇಜಿನಲ್ಲಿ ಬಿ.ಎಸ್‌ಸಿ ಆನರ್ಸ್ ಮುಗಿಸಿ ಎಂ.ಎಸ್‌ಸಿ (ಭೌತಶಾಸ್ತ್ರ)ಗೆ ಸೇರಿದರು. ಈ ಸಮಯದಲ್ಲೂ ರಾಮಕೃಷ್ಣ ವಿದ್ಯಾರ್ಥಿ ಮಂದಿರದಲ್ಲೇ ಆಶ್ರಯ ದೊರಕಿತು. ಹಿಂದೆ ಎಲ್ಲ ಪರೀಕ್ಷೆಗಳಲ್ಲಿ ಪ್ರಥಮ ಶ್ರೇಣಿಯಲ್ಲಿ ಉತ್ತೀರ್ಣರಾಗಿದ್ದಂತೆ ಯಾವುದೇ ತೊಂದರೆಯಿಲ್ಲದೇ ಪ್ರಥಮ ದರ್ಜೆಯಲ್ಲಿ ಪಾಸ್ ಆದರು.

೧೯೩೬ರಲ್ಲಿ ಬೆಂಗಳೂರಿಗೆ ಪಾದಾರ್ಪಣೆ ಮಾಡಿ ನ್ಯಾಷನಲ್ ಹೈಸ್ಕೂಲು ಸೇರಿ ವಿದ್ಯಾಭ್ಯಾಸ ಪ್ರಾರಂಭಿಸಿದ ನರಸಿಂಹಯ್ಯನವರು ಹಲವಾರು ರೀತಿಯ ಸಮಸ್ಯೆಗಳನ್ನು ಎದುರಿಸಿದರು. 'ಕ್ವಿಟ್ ಇಂಡಿಯಾ' ಚಳುವಳಿಯಲ್ಲಿ ಭಾಗವಹಿಸಿ, ಮತ್ತೆ ವಿದ್ಯಾಭ್ಯಾಸ ಮುಂದುವರೆಸಿ ೧೯೪೬ರಲ್ಲಿ ತಮ್ಮ ವಿದ್ಯಾರ್ಥಿ ಜೀವನ ಮುಗಿಸಿದರು. ೧೯೩೬ರಲ್ಲಿ ವಿದ್ಯಾರ್ಥಿಯಾಗಿ ಬಸವನಗುಡಿ ನ್ಯಾಷನಲ್ ಹೈಸ್ಕೂಲಿಗೆ ಬಂದು, ೧೯೪೬ರಲ್ಲಿ ನ್ಯಾಷನಲ್ ಕಾಲೇಜಿನ ಅಧ್ಯಾಪಕರಾಗಿ ಹೊಸ ಜೀವನ ಆರಂಭಿಸಿದರು. ಆದರೂ ನ್ಯಾಷನಲ್ ಕಾಲೇಜಿನ ಹಾಸ್ಟೆಲ್ ಮಾತ್ರ ಬಿಡಲಿಲ್ಲ. ಹಿಂದೆ ವಿದ್ಯಾರ್ಥಿಯಾಗಿದ್ದಾಗ ಉಚಿತ ಊಟ ವಸತಿ ಪಡೆದರೆ, ಈಗ ಹಾಸ್ಟೆಲಿನ ಮೇಲ್ವಿಚಾರಕರಾಗಿಯೂ ಕೆಲಸ ನಿರ್ವಹಿಸುವುದಲ್ಲದೆ ತಮ್ಮ ಊಟ ವಸತಿಗಾಗಿ ಹಣ ಕಟ್ಟಲು ಪ್ರಾರಂಭಿಸಿದರು.

## ಅಧ್ಯಾಪಕ ವೃತ್ತಿ ಜೀವನ

೧೯೪೬ರಲ್ಲಿ ಎಂ.ಎಸ್‌ಸಿ ಮುಗಿಸಿ ನ್ಯಾಷನಲ್ ಕಾಲೇಜಿಗೆ ಅಧ್ಯಾಪಕರಾದಾಗಿನಿಂದ ನಿವೃತ್ತಿ ಹೊಂದುವವರೆಗೆ ಅಧ್ಯಾಪಕರಾಗಿಯೇ ಸೇವೆ ಸಲ್ಲಿಸಿದ್ದಾರೆ. ಅಮೆರಿಕಾಗೆ ಪಿಎಚ್.ಡಿ. ಪದವಿಗಾಗಿ ಹೋದಾಗ ಮತ್ತು ಬೆಂಗಳೂರು ವಿಶ್ವವಿದ್ಯಾಲಯದ ಉಪಕುಲಪತಿಗಳಾದಾಗಿನ ಸಮಯವನ್ನು ಬಿಟ್ಟರೆ ಉಳಿದ ದಿನಗಳೆಲ್ಲ ದೀರ್ಘವಾದ ಅಧ್ಯಾಪಕ ಜೀವನವೇ.

ಎಚ್.ಎನ್. ತಮಗೆ ಬಹಳ ಇಷ್ಟವಾದ ಅಧ್ಯಾಪಕ ಜೀವನ ಆರಂಭಿಸಿದ ಒಂದು ವರ್ಷದಲ್ಲಿ ಭಾರತಕ್ಕೆ ಸ್ವಾತಂತ್ರ್ಯ ಬಂದಿತು. ೧೯೪೭ ಆಗಸ್ಟ್ ೧೫ರ ನಂತರ ಮೈಸೂರು ಚಲೋ ಚಳುವಳಿ ಆರಂಭವಾಯಿತು. ತುಂಬಾ ಕಷ್ಟದಲ್ಲಿದ್ದ, ಕೂಲಿ ನಾಲಿ ಮಾಡಿ ಬದುಕುತ್ತಿದ್ದ ಅಮ್ಮ ಮತ್ತು ತಂಗಿಯರ ಜೀವನಕ್ಕೆ ತಮ್ಮ ಆದಾಯ ಸ್ವಲ್ಪ ಸಹಾಯವಾಗಿತ್ತು. (ಈ ಸಮಯಕ್ಕೆ ತಂದೆ ಹನುಮಂತಪ್ಪನವರಾಗಲೇ ತೀರಿಕೊಂಡಿದ್ದರು.) ಮೈಸೂರು ಚಲೋ ಚಳುವಳಿಯಲ್ಲಿ ಭಾಗವಹಿಸಿದರೆ ಅವರಿಗೆ ಮತ್ತೆ ಅದೇ ಹಿಂದಿನ ಸ್ಥಿತಿ ಬರುತ್ತದಲ್ಲ ಎಂಬ ಯೋಚನೆ. ಕೊನೆಗೆ ಕಾಲೇಜಿಗೆ ರಾಜಿನಾಮೆ ನೀಡಿ ಮೈಸೂರು ಚಲೋ ಚಳುವಳಿಯಲ್ಲಿ ಧುಮುಕಿದರು. ಈ ಸಮಯದಲ್ಲಿ ತಾವೇ ಒಂದು ಪತ್ರಿಕೆ ''ಇನ್‌ಕ್ವಿಲಾಬ್'' ಪ್ರಾರಂಭಿಸಿದರು. ಮೈಸೂರು ಚಲೋ ಚಳುವಳಿ ಯಶಸ್ವಿಯಾಗಿ ನಡೆದು ಜವಾಬ್ದಾರಿ ಸರಕಾರವನ್ನು ತಂದುಕೊಟ್ಟಿತು. ಜವಾಬ್ದಾರಿ ಸರಕಾರ ರೂಪುಗೊಳ್ಳುವತನಕ ದಿನಾಕ ೧೨-೧೦-೪೭ರ ವರೆಗೆ 'ಇನ್‌ಕ್ವಿಲಾಬ್' ಬಂದಿತು. ತನ್ನ ಉದ್ದೇಶ ಮುಗಿದ ನಂತರ ತಾನೇ ನಿಂತುಹೋಯಿತು.

ಮೈಸೂರು ಚಲೋ ಚಳುವಳಿ ಮುಗಿದ ಮಾರನೇ ದಿವಸವೇ ನ್ಯಾಷನಲ್ ಕಾಲೇಜಿನ ಪ್ರಿನ್ಸಿಪಾಲರಾಗಿದ್ದ ಸಂಪತ್ಗಿರಿರಾವ್ ಅವರನ್ನು ನರಸಿಂಹಯ್ಯ ಕಂಡರು. ಸತ್ಯಾಗ್ರಹ ಪ್ರಾರಂಭವಾದ ದಿನದಿಂದ ಕಾಲೇಜಿನ ಯಾವ ವಿದ್ಯಾರ್ಥಿಗಳೂ ಕಾಲೇಜಿಗೆ ಹೋಗಿರಲಿಲ್ಲ. ಆದ್ದರಿಂದ ಪ್ರಿನ್ಸಿಪಾಲರು ಸಂತೋಷವಾಗಿಯೇ ಬರಮಾಡಿಕೊಂಡರು. ತಮ್ಮ ರಾಜಿನಾಮೆ ಪತ್ರ ಆಡಳಿತ ಮಂಡಳಿ ಚರ್ಚೆಗೇನೆ ತೆಗೆದುಕೊಳ್ಳದೇ ಇರುವುದರಿಂದ ಎಚ್.ಎನ್. ಮತ್ತೆ ಯಥಾಸ್ಥಿತಿಯಲ್ಲಿ ಅಧ್ಯಾಪಕರಾಗಿ ಮುಂದುವರೆದರು.

ಅಧ್ಯಾಪಕರಾದಾಗಲೂ ಕಾಲೇಜು ಹಾಸ್ಟೆಲಿನಲ್ಲೇ ಇರಲು ಆರಂಭಿಸಿದ ಎಚ್.ಎನ್. ಬರಬರುತ್ತ ತಾವೇ ಕಾಲೇಜಾಗುತ್ತ ಹೋದರು. ಈಗ ನ್ಯಾಷನಲ್ ಕಾಲೇಜು ಎಂದರೆ ಎಚ್.ಎನ್., ಎಚ್.ಎನ್. ಎಂದರೆ ನ್ಯಾಷನಲ್ ಕಾಲೇಜು ಎನ್ನುವಷ್ಟರಮಟ್ಟಿಗೆ ಲೀನವಾಗಿಬಿಟ್ಟಿದ್ದಾರೆ. ಹಾಸ್ಟೆಲಿನಲ್ಲೇ ಇರಲು ಪ್ರಾರಂಭಿಸಿದ ಎಚ್.ಎನ್. ಕಾಲೇಜು ಮುಗಿದರೂ ತಮ್ಮ ಕೆಲಸದ ಸಮಯ ಮುಗಿಸಲಿಲ್ಲ. ಹಗಲು ಕಾಲೇಜಿನಲ್ಲಿ ಅಧ್ಯಾಪಕರಾದರೆ, ಸಾಯಂಕಾಲ, ರಾತ್ರಿಸಮಯ ಹಾಸ್ಟೆಲ್ ವಿದ್ಯಾರ್ಥಿಗಳಿಗೆ ಪಾಠ ಹೇಳಿಕೊಡುತ್ತಿದ್ದರು. ಜೊತೆಗೆ ಕ್ರಿಡೆ, ವ್ಯಾಯಾಮ, ಯೋಗ

ಮುಂತಾದ ಕಾರ್ಯಗಳಲ್ಲಿ ವಿದ್ಯಾರ್ಥಿಗಳನ್ನು ತೊಡಗಿಸುತ್ತಿದ್ದರು. ವಿದ್ಯಾರ್ಥಿಗಳ ಶೈಕ್ಷಣಿಕ ಜೀವನವಲ್ಲದೆ ಅವರ ಸರ್ವತೋಮುಖ ಬೆಳವಣಿಗೆಗೆ ಶ್ರಮಿಸುತ್ತಿದ್ದರು.

**ಉನ್ನತ ವ್ಯಾಸಂಗ**

೧೯೪೬ರಲ್ಲಿ ಎಂ.ಎಸ್‌ಸಿ ಮುಗಿಸಿ ಅಧ್ಯಾಪಕ ವೃತ್ತಿಗೆ ಸೇರುವ ಮುನ್ನ ಸ್ನೇಹಿತರ ಒತ್ತಾಯದಿಂದ, ರಾಮಕೃಷ್ಣ ಆಶ್ರಮದ ಅಧ್ಯಕ್ಷರಾಗಿದ್ದ ಸ್ವಾಮಿ ತ್ಯಾಗೀಶಾನಂದರ ಅಭಿಪ್ರಾಯದಂತೆ ವಿದೇಶಕ್ಕೆ ಹೋಗುವುದು ಸರಿಯೋ ತಪ್ಪೋ ಎಂದು ಯೋಚನೆಯಾಯಿತು. ಆರಂಭದಿಂದಲೇ ರಾಷ್ಟ್ರೀಯ ಮನೋಭಾವ ಬೆಳೆಸಿಕೊಂಡ ಎಚ್.ಎನ್. ಅವರಿಗೆ ಕ್ವಿಟ್ ಇಂಡಿಯಾ ಚಳುವಳಿಯಲ್ಲಿನ ಅನುಭವಗಳು ದೇಶಾಭಿಮಾನವನ್ನು ಹೆಚ್ಚಿಸಿದ್ದವು. ಆದ್ದರಿಂದ ಯೋಚನೆಗೆ ಸಿಲುಕಿದ ಎಚ್.ಎನ್. ಗಾಂಧೀಜಿಯವರಿಗೇನೆ ಪತ್ರ ಬರೆದು ತಮ್ಮ ಉನ್ನತ ವ್ಯಾಸಂಗದ ಅಭಿಪ್ರಾಯ ತಿಳಿಸಿದರು. ಅದಕ್ಕೆ ಪ್ರತಿಯಾಗಿ ತಕ್ಷಣವೇ ಗಾಂಧೀಜಿಯವರಿಂದ ''ನಮ್ಮ ಯುವ ಜನಾಂಗ ಪರದೇಶಕ್ಕೆ ಹೋಗುವ ಅವಶ್ಯಕತೆಯಿಲ್ಲ''ಎಂಬ ಉತ್ತರ ಬಂದಾಗ ತಮ್ಮ ವಿದೇಶ ಪ್ರವಾಸಕ್ಕೆ ತಿಲಾಂಜಲಿ ಹಾಡ್ಡಿದರು.

ನ್ಯಾಷನಲ್ ಕಾಲೇಜಿನಲ್ಲಿ ಅಧ್ಯಾಪಕರಾಗಿ ಸೇರಿದ ಹತ್ತು ವರ್ಷಗಳ ನಂತರ ೧೯೫೬ರಲ್ಲಿ ತಮ್ಮ ಉನ್ನತ ವ್ಯಾಸಂಗಕ್ಕಾಗಿ ವಿದೇಶಕ್ಕೆ ಹೋಗಬೇಕೆನಿಸಿತು. ೧೯೫೭ರಲ್ಲಿ ಅಮೆರಿಕದ ಕೊಲಂಬಸ್‌ನ ಓಹಿಯೋ ಸ್ಟೇಟ್ ಯೂನಿವರ್ಸಿಟಿಯಲ್ಲಿ (Ohio state University) ಪಿ. ಎಚ್‌ಡಿ. ಅಧ್ಯಯನದ ಪ್ರವೇಶದ ಜೊತೆಗೆ ಬೋಧನಾ ಸಹಾಯಕ ಸ್ಥಾನ ದೊರೆತು ಉನ್ನತ ವಿದ್ಯಾಭ್ಯಾಸಕ್ಕಾಗಿ ಅಮೆರಿಕಕ್ಕೆ ತೆರಳಿದರು.

ಅಮೆರಿಕ ಸಂಪೂರ್ಣವಾಗಿ ಮಾಂಸಹಾರಿ ಇರುವ ಜನ. ನರಸಿಂಹಯ್ಯನವರು ಅಪ್ಪಟ ಶಾಖಾಹಾರಿ. ಅಮೆರಿಕನ್ನರ ವೇಷಭೂಷಣಕ್ಕೂ ಡಾ. ಎಚ್.ಎನ್. ಅವರ ವೇಷ ಭೂಷಣಕ್ಕೂ ತಾಳೆಯೇ ಇಲ್ಲ. ಎಚ್.ಎನ್. ಅವರ ಉಡುಗೆ -ತೊಡುಗೆ ಊಟ ಉಪಹಾರ ನೋಡಿ ಅನೇಕ ಅಮೆರಿಕನ್ನರು ಬೆರಗಾಗಿದ್ದಾರೆ, ಅಚ್ಚರಿ ಪಟ್ಟಿದ್ದಾರೆ, ನಕ್ಕಿದ್ದಾರೆ. ಇದಕ್ಕೆ ಸಂಬಂಧಿಸಿದಂತೆ ಎಚ್.ಎನ್. ಅವರು ಅಮೆರಿಕಾದಲ್ಲಿದ್ದಾಗ ನಡೆದ ಒಂದು ಘಟನೆ ಹೇಳುವುದು ಸೂಕ್ತ ಎನಿಸುತ್ತದೆ. ಒಂದು ಸಾರಿ ಎಚ್.ಎನ್. ಓಹಿಯೋ ವಿಶ್ವವಿದ್ಯಾಲಯದಲ್ಲಿ ಪಿಎಚ್.ಡಿ. ಅಧ್ಯಯನ ಮಾಡುತ್ತಿದ್ದಾಗ ಜ್ವರ ಬಂದು ವಿಶ್ವವಿದ್ಯಾಲಯದ ಆರೋಗ್ಯ ಕೇಂದ್ರಕ್ಕೆ ಹೋಗುತ್ತಾರೆ. ''ಡಾಕ್ಟರೊಬ್ಬರು ನನಗೆ ಇಂಜಕ್ಷನ್ ಕೊಡಲು ಹೇಳಿ ಪಕ್ಕದ ರೂಮಿಗೆ ಹೋದರು, ಮತ್ತೊಬ್ಬ ರೋಗಿಯನ್ನು ನೋಡಲು. ಆ ನರ್ಸ್ ನನಗೆ ಇಂಜಕ್ಷನ್ ಕೊಡುವುದಕ್ಕೆ ಮುಂಚೆ 'ನಿಮಗೆ ಮೊಟ್ಟೆತಿಂದರೆ ಅಲರ್ಜಿ ಆಗುತ್ತದೆಯೇ' ಅಂತ ಕೇಳಿದಳು. ನಾನು ಅದಕ್ಕೆ, ನನಗೆ ಗೊತ್ತಿಲ್ಲ ಅಂತ ಹೇಳಿದೆ. 'ಹಾಗಂದ್ರೇನರ್ಥ?' ಅಂತ ರೇಗಿದಳು. ಆಗ ನಾನು ಇದುವರೆಗೆ ನಾನು ಮೊಟ್ಟೆ ತಿಂದಿಲ್ಲ. ಆದ್ದರಿಂದ ಮೊಟ್ಟೆ ತಿಂದರೆ ನನಗೆ ಅಲರ್ಜಿಯೋ ಅಲ್ಲವೋ ಗೊತ್ತಿಲ್ಲ, ಅಂದೆ. ಅವಳಿಗೆ ಆಶ್ಚರ್ಯವೋ ಆಶ್ಚರ್ಯ. 'ಏನು ನೀವು

ಇದುವರೆಗೆ ಮೊಟ್ಟೆ ತಿಂದೇ ಇಲ್ವೇನು? ಬನ್ನಿ ಡಾಕ್ಟರ್ ಹತ್ತಿರ ಹೋಗೋಣ' ಎನ್ನುತ್ತ ನನ್ನನ್ನು ಅಪರಾಧಿಯೊಬ್ಬನನ್ನು ನ್ಯಾಯಾಧೀಶನ ಹತ್ತಿರ ಕರೆದುಕೊಂಡು ಹೋಗುವಂತೆ ಕರೆದುಕೊಂಡು ಹೋದಳು. ''ಡಾಕ್ಟ್ರೇ ಈ ಹುಡುಗ ಇದುವರೆಗೆ ಮೊಟ್ಟೆ ತಿಂದೇ ಇಲ್ವಂತೆ ಅದಕ್ಕೆ ಇವನಿಗೆ ಮೊಟ್ಟೆಯಿಂದ ಅಲರ್ಜಿ ಹೌದೋ ಅಲ್ಲವೋ ಗೊತ್ತೇ ಇಲ್ವಂತೆ. ಮತ್ತೆ ಈಗ ನಾನೇನು ಮಾಡಲಿ?'' ಎನ್ನುವ ಸಮಸ್ಯೆ ಅವಳದಾಗಿತ್ತು.

ಅಮೆರಿಕ ಮತ್ತು ಭಾರತದ ಸಂಸ್ಕೃತಿ ಪರಸ್ಪರ ಭಿನ್ನವಾದವುಗಳು ಎಂದು ಈ ಹಿಂದೆಯೇ ಹೇಳಿದ್ದೇನೆ. ಸಾಮಾನ್ಯವಾಗಿ ಭಾರತೀಯರು ಅಮೆರಿಕಕ್ಕೆ ಹೋದರೆ ಅಲ್ಲಿನ ಸಂಸ್ಕೃತಿಗೆ ಹೊಂದಿಕೊಳ್ಳಲು ಪ್ರಯತ್ನಿಸುತ್ತಾರೆ. ಅವರಂತೆ ಇರಲು ಯತ್ನಿಸುತ್ತಾರೆ. ಆದರೆ ನರಸಿಂಹಯ್ಯನವರು ಇದಕ್ಕೆ ಅಪವಾದ. ವಿದ್ಯಾರ್ಥಿಯಾಗಿ ಮೂರು ವರ್ಷ, ಸಂದರ್ಶಕ ಪ್ರಾಧ್ಯಾಪಕರಾಗಿ ಒಂದು ವರ್ಷ ನರಸಿಂಹಯ್ಯನವರು ಅಮೆರಿಕದಲ್ಲಿದ್ದರು. ಸಂಪೂರ್ಣ ಭಾರತೀಯರಾಗಿಯೇ ಬದುಕಿದರು. ನಾಲ್ಕು ವರ್ಷ ಕಾಲ ಉಪ್ಪಿಟ್ಟು, ಬ್ರೆಡ್ ತಿಂದೇ ಕಾಲ ಕಳೆದರು. ಬದಲಾಗಿ ಮಾಂಸಾಹಾರಿಯಾಗಲಿಲ್ಲ. ಖಾದಿ ಉಡುಗೆ ಬಿಡಲಿಲ್ಲ. ಮೊದಲು ಹೇಗಿದ್ದರೋ, ಈಗಲೂ ಹೇಗಿದ್ದಾರೋ, ಅಲ್ಲಿಯೂ ಹಾಗೆಯೇ ಇದ್ದರು. ತಮ್ಮ ಓದಿಗೆ ಹೆಚ್ಚಿನ ಗಮನ ಕೊಟ್ಟು, ಹೆಚ್ಚು ಕಾಲ ಅದಕ್ಕಾಗಿ ವಿನಿಯೋಗಿಸಿದರು. ತಮ್ಮ ಉಡುಗೆ - ತೊಡುಗೆ, ಊಟ ಉಪಹಾರಗಳಿಗೆ ಮಹತ್ವ ಕೊಡಲೇ ಇಲ್ಲ. ೧೯೬೦ರಲ್ಲಿ ಕಠಿಣ ಪರಿಶ್ರಮದಿಂದ 'ನ್ಯೂಕ್ಲಿಯರ್ ಫಿಸಿಕ್ಸ್'ನಲ್ಲಿ ಡಾಕ್ಟರೇಟ್ ಪದವಿ ಪಡೆದುಕೊಂಡರು.

## ಪ್ರಾಂಶುಪಾಲರಾಗಿ

ನ್ಯಾಷನಲ್ ಕಾಲೇಜಿನಲ್ಲಿ ಪ್ರಿನ್ಸಿಪಾಲರನ್ನು ಅಧ್ಯಾಪಕ ವರ್ಗದವರೇ ಚುನಾಯಿಸುವ ಪದ್ಧತಿ ಇತ್ತು. ಎಚ್.ಎನ್. ೧೯೬೧ರಲ್ಲಿ ಅಮೆರಿಕಾದಲ್ಲಿ ಉನ್ನತ ವಿದ್ಯಾಭ್ಯಾಸ ಮುಗಿಸಿಕೊಂಡು ಭಾರತಕ್ಕೆ ಹಿಂದಿರುಗಿದ ನಂತರ ಅವರನ್ನೇ ಅಧ್ಯಾಪಕ ವರ್ಗ ಪ್ರಿನ್ಸಿಪಾಲರನ್ನಾಗಿ ಆಯ್ಕೆ ಮಾಡಿತು.

ಸರ್ವಾನುಮತದಿಂದ ೧೯೬೧ರಲ್ಲಿ ಪ್ರಾಂಶುಪಾಲರಾಗಿ ಆಯ್ಕೆಯಾದ ಎಚ್.ಎನ್. ಸುದೀರ್ಘ ಕಾಲ (ಸುಮಾರು ೧೨ ವರ್ಷಗಳು) ನ್ಯಾಷನಲ್ ಕಾಲೇಜಿನ ಪ್ರಾಂಶುಪಾಲರಾಗಿ ಕಾಲೇಜನ್ನು ನಡೆಸಿದ್ದಾರೆ. ಇವರ ಆಡಳಿತ ಕಾಲದಲ್ಲಿ ಕಾಲೇಜಿನಲ್ಲಿ ಅನೇಕ ಮಾರ್ಪಾಡುಗಳನ್ನು ಮಾಡಿದ್ದಾರೆ, ಪ್ರಯೋಗಗಳನ್ನು ನಡೆಸಿದ್ದಾರೆ. ಆಟ-ಪಾಠಗಳಿಗೆ, ಸಾಂಸ್ಕೃತಿಕ ಚಟುವಟಿಕೆಗಳಿಗಾಗಿ ಅನೇಕ ವೇದಿಕೆಗಳನ್ನು ನಿರ್ಮಿಸಿದ್ದಾರೆ.

ಅಮೆರಿಕದಿಂದ ಬಂದ ಮೇಲೆ ತಮ್ಮ ಕಾಲೇಜಿನ ಪರೀಕ್ಷಾ ಪದ್ಧತಿಯಲ್ಲಿ ಮಾಡಿದ ಶೈಕ್ಷಣಿಕ ಪ್ರಯೋಗವಂತೂ ಗಮನಾರ್ಹವಾದದ್ದು. ಅದನ್ನು ಇಲ್ಲಿ ಹೇಳಲೇಬೇಕು. ಅಮೆರಿಕಾದಲ್ಲಿದ್ದಾಗ ಎಚ್.ಎನ್. ಅವರು ಉಸ್ತುವಾರಿ ಇಲ್ಲದ ಪರೀಕ್ಷೆಗಳನ್ನು, ರಸ್ತೆ ಪಕ್ಕದಲ್ಲಿ ಮಾರಾಟಕ್ಕೆ ಯಾರೂ ನೋಡಿಕೊಳ್ಳದೇ ಇರುವ, ನಂಬಿಕೆ ಮೇಲೆ ಇಟ್ಟಿರುವ

ಪತ್ರಿಕೆಗಳನ್ನು ನೋಡಿದ್ದರು. ಅದರಿಂದ ಪ್ರಭಾವಿತರಾಗಿ ನಮ್ಮ ಕಾಲೇಜಿನಲ್ಲೂ ಉಸ್ತುವಾರಿ ಇಲ್ಲದ ಪರೀಕ್ಷೆಗಳನ್ನು ಏಕೆ ನಡೆಸಬಾರದು ಎಂದು ಯೋಚಿಸಿದರು. ಉಪಾಧ್ಯಾಯರ ಸಂಘದವರೆಲ್ಲ ಕೂಡಿ ಇಂಥ ಪರೀಕ್ಷೆಗಳು ಕಾರ್ಯಗತ ಮಾಡುವಲ್ಲಿನ ಅವಶ್ಯಕತೆ ಕುರಿತು ಚರ್ಚಿಸಿದರು. ಅದಕ್ಕೆ ಸಂಬಂಧಿಸಿದಂತೆ ಸಾಕಷ್ಟು ಪೂರ್ವಸಿದ್ಧತೆ ಮಾಡಲಾಯಿತು. ಎಲ್ಲಾ ತರಗತಿಗಳಲ್ಲಿಯೂ ಪ್ರಾಮಾಣಿಕತೆ, ಆತ್ಮಸಾಕ್ಷಿಗಳ ಅವಶ್ಯಕತೆಯನ್ನು ಒತ್ತಿ ಹೇಳಿದರು. ಉಸ್ತುವಾರಿ ಇಲ್ಲದಾಗ ಕಾಪಿ ಮಾಡಿದರೆ ಆಗುವ ಆತ್ಮವಂಚನೆ, ತಮಗೆ ತಾವೇ ಮೋಸ ಮಾಡಿಕೊಂಡಂತೆ ಎಂಬುದನ್ನು ವಿದ್ಯಾರ್ಥಿಗಳ ಮೇಲೆ ಪ್ರಭಾವ ಬೀರುವಂತೆ ಪ್ರತಿ ತರಗತಿಯಲ್ಲೂ ಹೇಳಿದರು. ಅಧ್ಯಾಪಕರ ಮಾತುಗಳು ಪ್ರಭಾವ ಬೀರಿದಂತೆ ತೋರಿತು. ಮೊದಲೇ ಎಲ್ಲ ಯೋಚಿಸಿದಂತೆ ಉಸ್ತುವಾರಿ ಇಲ್ಲದೆ ಆ ವರ್ಷದ ಪರೀಕ್ಷೆಗಳನ್ನು ಯಶಸ್ವಿಯಾಗಿ ನಡೆಸಿದರು. ಅದು ಆ ವರ್ಷ ವರ್ತಮಾನ ಪತ್ರಿಕೆಗಳಲ್ಲೂ ಕೂಡ ಪ್ರಕಟವಾಯಿತು. ಹೀಗೆ ವಿದ್ಯಾರ್ಥಿಗಳಲ್ಲಿ ಆತ್ಮಸ್ಥೈರ್ಯ ಬೆಳೆಸಿ ವಿದ್ಯಾರ್ಥಿಗಳನ್ನೂ, ಅದರಿಂದ ಕಾಲೇಜಿನ ಬೆಳವಣಿಗೆಯನ್ನೂ ಬೆಳೆಸಲು ಕಾರಣರಾದರು. ಕರ್ನಾಟಕದ ಸರ್ವಶ್ರೇಷ್ಠ, ಅತ್ಯುತ್ತಮ ಕಾಲೇಜುಗಳಲ್ಲಿ ನ್ಯಾಷನಲ್ ಕಾಲೇಜನ್ನು ಮುಂಚೂಣಿಗೆ ತಂದರು. ಅನೇಕ ವರ್ಷಗಳ ಕಾಲ ನ್ಯಾಷನಲ್ ಕಾಲೇಜು ರ್‍ಯಾಂಕ್ ಕಾಲೇಜು ಎಂದೇ ಜನ ಕರೆಯುತ್ತಿದ್ದರು. ಅಂದಿನಿಂದ ಇಂದಿನವರೆಗೆ ರ್‍ಯಾಂಕ್ ಇಲ್ಲದೇ ಇರುವ ವರ್ಷ ಇಲ್ಲ. ಕೆಲವು ರ್‍ಯಾಂಕ್‌ಗಳಂತು ಕಟ್ಟಿಟ್ಟ ಬುತ್ತಿ. ಆದ್ದರಿಂದಲೇ ಇಂದು ಅನೇಕ ಪ್ರತಿಷ್ಠಿತ ಸ್ಥಾನಗಳಲ್ಲಿ ಅಂದಿನ ನ್ಯಾಷನಲ್ ಕಾಲೇಜಿನ ವಿದ್ಯಾರ್ಥಿಗಳಿದ್ದಾರೆ( ವಿಜ್ಞಾನಿಗಳಾಗಿ, ಕ್ರಿಡಾಪಟುಗಳಾಗಿ, ಸಿನಿಮಾ ನಟರಾಗಿ, ಸಂಗೀತ ವಿದ್ವಾಂಸರಾಗಿ ಅನೇಕ ಕ್ಷೇತ್ರಗಳಲ್ಲಿ). ಸ್ವತಃ ಎಚ್.ಎನ್. ಅವರೇ ತಮ್ಮ ಒಂದು ಲೇಖನದಲ್ಲಿ ಮುಂಬೈನ ಆಡಳಿತ ತಜ್ಞರೊಬ್ಬರು ಪ್ರಿನ್ಸಿಪಾಲರಿಗೆ ಇರಬೇಕಾದ ಯೋಗ್ಯತೆ ಕುರಿತು ಹೇಳಿದ ಮಾತುಗಳನ್ನು ಕೋಟ್ ಮಾಡುತ್ತಾರೆ. ಮುಂಬಯಿನ ವಿಲ್ಸನ್ ಕಾಲೇಜಿನ ಪ್ರಿನ್ಸಿಪಾಲರಾಗಿದ್ದ ಡಾ. ಜೆ. ಡಬ್ಲು. ಏರನ್ ತಮ್ಮ ಒಂದು ಪುಸ್ತಕದಲ್ಲಿ ಪ್ರಿನ್ಸಿಪಾಲರಿಗೆ ಇರಬೇಕಾದ ಯೋಗ್ಯತೆ ಕುರಿತು ಆಡಿದ ಮಾತುಗಳು ಡಾ.ನರಸಿಂಹಯ್ಯನವರಿಗೆ ಅಕ್ಷರಶಃ ಹೊಂದಾಣಿಕೆ ಆಗುತ್ತದೆ. ಆ ಮಾತುಗಳು ಹೀಗಿವೆ:

''ಪ್ರಿನ್ಸಿಪಾಲರ ನೇಮಕ ಉಳಿದವರಿಗೆ ಮಾರ್ಗದರ್ಶನ ನೀಡಲು ಆಗಿರುತ್ತದೆ. ಅದು ಅವನ ಕರ್ತವ್ಯವಾದರೂ ಅದನ್ನು ಹೇಗೆ ನಿರ್ವಹಿಸಬೇಕು ಎಂಬುದನ್ನು ಯೋಚಿಸಬೇಕಾಗುತ್ತದೆ. ಪ್ರಿನ್ಸಿಪಾಲ್ ಆದವರು ವೃತ್ತಿಯ ಶಿಕ್ಷಣದ ಬಗ್ಗೆ ತಾತ್ವಿಕ ಧೋರಣೆಯನ್ನು ಹೊಂದಿರಬೇಕು. ಸಮಾಜದ ನಿರ್ಮಾಣದಲ್ಲಿ ತನ್ನ ಕಾಲೇಜು ವಹಿಸಬೇಕಾದ ಜವಾಬ್ದಾರಿಯನ್ನು ಪ್ರಚಲಿತ ಅಭಿಪ್ರಾಯಗಳ ಹಿನ್ನೆಲೆಯಲ್ಲಿ ಅರ್ಥಮಾಡಿಕೊಳ್ಳಲು ಸಮರ್ಥನಾಗಿರಬೇಕು. ಸಾರ್ವಜನಿಕರು, ಸಹೋದ್ಯೋಗಿಗಳು ಮತ್ತು ಆಡಳಿತ ಮಂಡಳಿ ಪ್ರಿನ್ಸಿಪಾಲರ ಶೈಕ್ಷಣಿಕ ಮತ್ತು ಆಡಳಿತ ಸಾಮರ್ಥ್ಯಕ್ಕೆ ಬೆಲೆಕೊಡುವುದು ಅನಿವಾರ್ಯವಾಗುವಂತೆ ಅವರ ಕಾರ್ಯ ನಿರ್ವಹಣೆ ಇರಬೇಕು. ಆಡಳಿತ ನಿರ್ವಹಣೆಯಲ್ಲಿ ಸಹ ಅಧ್ಯಾಪಕರ ಸಹಕಾರವನ್ನು ಎಷ್ಟರಮಟ್ಟಿಗೆ ಹೇಗೆ ತೆಗೆದುಕೊಳ್ಳಬೇಕೆಂದು ಅವನಿಗೆ ಗೊತ್ತಿರಬೇಕು. ಕಾಲೇಜಿನ ಆಶಯಗಳಿಗೆ ಉಚಿತವಾಗಿ,

ಅದರ ಅಭ್ಯುದಯಕ್ಕೆ ದುಡಿಯಲು ಸಹ ಅಧ್ಯಾಪಕರಿಗೆ ಮಾರ್ಗದರ್ಶನ ಮಾಡಬೇಕೇ ಹೊರತು ಎಲ್ಲ ಕಾರ್ಯಗಳನ್ನು ಅವರೇ ನಿರ್ವಹಿಸಲು ಹೋಗಬಾರದು. ಅವೆಲ್ಲಕ್ಕಿಂತ ಹೆಚ್ಚಾಗಿ ಆಡಳಿತ ನಿರ್ವಹಣೆಯಲ್ಲಿ, ಹಣಕಾಸಿನ ವ್ಯವಹಾರದಲ್ಲಿ ಕಾಲೇಜಿನ ಎಲ್ಲ ಸದಸ್ಯರನ್ನು ನಂಬಿಕೆಗೆ ತೆಗೆದುಕೊಳ್ಳಬೇಕು. ಇಲ್ಲದಿದ್ದರೆ ಸಂಶಯದ ಸುಳ್ಳು ವದಂತಿಗಳಿಗೆ ಅದು ಕಾರಣವಾಗುತ್ತದೆ. ಕಾಲೇಜಿನ ಬೇರೆ ಬೇರೆ ವಿಭಾಗಗಳ ಮುಖ್ಯಸ್ಥರ ಜೊತೆಯಲ್ಲಿ ವ್ಯವಹರಿಸುವ ಸಂದರ್ಭದಲ್ಲಿ ಕೂಡ, ಕಿರಿಯ ಅಧ್ಯಾಪಕರು ಸ್ವಂತ ಅಥವಾ ಶೈಕ್ಷಣಿಕ ವಿಷಯಗಳನ್ನು ಅವರೊಡನೆ ಮುಕ್ತವಾಗಿ ಚರ್ಚಿಸುವ ವಾತಾವರಣವನ್ನು ಪ್ರಿನ್ಸಿಪಾಲರು ನಿರ್ಮಿಸಬೇಕು. ಅವರ ಅರ್ಪಣಾ ಮನೋಭಾವ ಸಂಸ್ಥೆಯ ಜೀವಂತ ಶಕ್ತಿಯಾಗಿ, ಉಳಿದ ಎಲ್ಲರಿಗೂ ತಮ್ಮ ಶಕ್ತ್ಯಾನುಸಾರ ಕೆಲಸ ಮಾಡಲು ಅವಕಾಶ ನೀಡುವಂತಿರಬೇಕು. ಅವರ ನಡವಳಿಕೆ ದೃಢ ಚಿತ್ತದಿಂದ ಕೂಡಿದ್ದು ಅವುಗಳಲ್ಲಿ ವಿದ್ಯಾರ್ಥಿಗಳಿಗೆ, ಸಹಅಧ್ಯಾಪಕರಿಗೆ ನಂಬಿಕೆಯುಂಟಾಗುವಂತಿರಬೇಕು. ಅವರ ಯಾವುದೇ ಕ್ರಮವು ಏನೇ ಆದರೂ ಕಾಲೇಜಿನ ಶೈಕ್ಷಣಿಕ ಪ್ರಗತಿಯನ್ನೇ ದೃಷ್ಟಿಯಲ್ಲಿ ಹೊಂದಿರುತ್ತದೆ ಎಂಬ ನಂಬಿಕೆ ಇರಬೇಕು.

ಈ ರೀತಿಯ ವ್ಯಕ್ತಿಯು ಕಾಲೇಜಿನ ಮುಖ್ಯಸ್ಥರಾಗಿ, ಶೈಕ್ಷಣಿಕ ಸಮೂಹಕ್ಕೆ ಮಾರ್ಗದರ್ಶನ ನೀಡಬೇಕು.''

ಡಾ. ಜೆ. ಡಬ್ಲು. ಏರನ್ ಅವರ ಮಾತುಗಳನ್ನು ಇಲ್ಲಿ ಉದ್ಧರಿಸಲು ಕಾರಣ, ಈ ಎಲ್ಲ ಮಾತುಗಳು ಅಕ್ಷರಶಃ ಎಚ್.ಎನ್. ಅವರಿಗೆ ಹೊಂದುತ್ತವೆ. ಡಾ. ಎಚ್. ನರಸಿಂಹಯ್ಯನವರು ಪ್ರಾಂಶುಪಾಲರಾಗಿದ್ದಾಗಷ್ಟೇ ಈ ಮಾತುಗಳನ್ನು ಪಾಲಿಸಿದರು ಅಂತಲ್ಲ, ಈಗಲೂ ನ್ಯಾಷನಲ್ ಎಜ್ಯುಕೇಷನ್ ಸೊಸೈಟಿಯ ಅಧ್ಯಕ್ಷರಾಗಿ ಸಂಪೂರ್ಣವಾಗಿ ಪಾಲಿಸುತ್ತಿದ್ದಾರೆ. ಆದ್ದರಿಂದಲೇ ಅವರ ಬಗ್ಗೆ ಇದುವರೆಗೆ ಯಾವುದೇ ಒಂದು ಸಣ್ಣ ವಿರೋಧ ಕೂಡ ಕಂಡು ಬಂದಿಲ್ಲ.

**ಉಪಕುಲಪತಿಗಳಾಗಿ**

೧೯೭೨ರಲ್ಲಿ ಡಾ. ಎಚ್.ನರಸಿಂಹಯ್ಯನವರನ್ನು ಬೆಂಗಳೂರು ವಿಶ್ವವಿದ್ಯಾಲಯದ ಉಪಕುಲಪತಿಗಳನ್ನಾಗಿ ನೇಮಿಸಲಾಯಿತು. ೧೯೭೨ ರಿಂದ ಸತತವಾಗಿ ಐದು ವರ್ಷಗಳ ಕಾಲ ಉಪಕುಲಪತಿಗಳಾಗಿ ವಿಶ್ವವಿದ್ಯಾಲಯದ ಸರ್ವತೋಮುಖ ಏಳಿಗೆಗಾಗಿ ದುಡಿದರು. ಇನ್ನೂ ತಮ್ಮ ಅಧಿಕಾರದ ಅವಧಿ ಇರುವಾಗಲೇ ತಮ್ಮ ಅಧಿಕಾರಕ್ಕೆ, ತಮ್ಮ ಕಾರ್ಯಪ್ರವೃತ್ತಿಗೆ ಕುಂದಾದಾಗ ರಾಜಿನಾಮೆ ನೀಡಿದರು.

೧೯೭೨ ರಿಂದ ೧೯೭೭ರ ವರೆಗೆ ವಿಶ್ವವಿದ್ಯಾಲಯದ ಅನೇಕ ಕ್ಷೇತ್ರಗಳಲ್ಲಿ ಉಪಯುಕ್ತ ಮಾರ್ಪಾಡುಗಳನ್ನು ಮಾಡಿದರು. ಅನೇಕ ಪ್ರಯೋಗಗಳನ್ನು ನಡೆಸಿದರು. ಉಪಯುಕ್ತ ಪುಸ್ತಕಗಳನ್ನು ಪ್ರಕಟಿಸಿದರು. ತಾವು ಉಪಕುಲಪತಿ ಆದ ಕೂಡಲೇ ಮಾಡಿದ ಬಹುಮುಖ್ಯ ಕೆಲಸ ಎಂದರೆ ಸೆಂಟ್ರಲ್ ಕಾಲೇಜಿನ ಆವರಣದಲ್ಲಿದ್ದ ವಿಶ್ವವಿದ್ಯಾಲಯವನ್ನು ನಾಗರಬಾವಿ ಕ್ಯಾಂಪಸ್‌ಗೆ ಬದಲಾವಣೆ ಮಾಡಿದರು. ಅನೇಕ

ವಿಭಾಗಗಳನ್ನು ಕಟ್ಟಿಸಿ ವ್ಯವಸ್ಥಿತವಾಗಿ ವಿಭಾಗಗಳು ನಡೆಯುವಂತೆ ನೋಡಿಕೊಂಡರು. ನಗರ ಮಧ್ಯದಿಂದ ನಾಗರಬಾವಿ ಆವರಣಕ್ಕೆ ವಿಶ್ವವಿದ್ಯಾಲಯ ವರ್ಗಾಯಿಸಿದ್ದು ಒಂದು ದೊಡ್ಡ ಸಾಧನೆ ಎಂದು ಸ್ವತಃ ಎಚ್.ಎನ್. ಅವರೇ ಹೇಳುತ್ತಾರೆ. ಏಕೆಂದರೆ ಇಡೀ ಒಂದು ವಿಶ್ವವಿದ್ಯಾಲಯವೇ ಬೇರೆ ಕಡೆಗೆ ವರ್ಗಾಯಿಸುವುದು ಅಷ್ಟೊಂದು ಸುಲಭದ ಕೆಲಸವೇನಲ್ಲ. ಮತ್ತು ಹೊಸ ಕಟ್ಟಡಗಳು, ರಸ್ತೆಗಳು ಹೀಗೆ ಹಲವಾರು ಸೌಲಭ್ಯಗಳನ್ನು ಕಲ್ಪಿಸಿರುವುದು ಒಂದು ಮಹತ್ತರ ಕೆಲಸವೇ ಸರಿ.

ಸಾಹಿತ್ಯದ ಪುಸ್ತಕಗಳನ್ನು ಪ್ರಕಟಿಸುವಲ್ಲಿಯೂ ಕೂಡ ಹೊಸ ಹೊಸ ಪ್ರಯೋಗಗಳನ್ನು ಮಾಡಿದರು. ಇವರ ಕಾಲದಲ್ಲಿಯೇ ಸಾಮಾನ್ಯನಿಗೆ ಸಾಹಿತ್ಯ ಮಾಲೆಯಲ್ಲಿ ವಿಚಾರ ಸಾಹಿತ್ಯದ ಅನೇಕ ಪುಸ್ತಕಗಳನ್ನು ಪ್ರಕಟಿಸಿದರು. ಮತ್ತು ಪ್ರತಿವರ್ಷ ಘಟಿಕೋತ್ಸವದ ಸಮಯದಲ್ಲಿ ಒಂದು ಒಳ್ಳೆಯ ಪುಸ್ತಕ ಪ್ರಕಟಿಸಿ ಎಲ್ಲ ಅಧ್ಯಾಪಕರಿಗೂ ವಿದ್ಯಾರ್ಥಿಗಳಿಗೂ ಕೊಡುವ ಪದ್ಧತಿ ಜಾರಿಗೆ ತಂದರು.

ಶೈಕ್ಷಣಿಕವಾಗಿಯೂ ಪದವಿ ಮತ್ತು ಸ್ನಾತಕೋತ್ತರ ಪರೀಕ್ಷೆ ಪದ್ಧತಿಗಳಲ್ಲಿ ಸಾಕಷ್ಟು ಬದಲಾವಣೆ ಮತ್ತು ಸುಧಾರಣೆಗಳನ್ನು ಮಾಡಿದ್ದಾರೆ ತಮ್ಮ ಕಾಲದಲ್ಲಿ. ಬಹಳ ಮುಖ್ಯವಾದ ಶೈಕ್ಷಣಿಕ ಬದಲಾವಣೆ ಎಂದರೆ ಪ್ರಶ್ನೆಪತ್ರಿಕೆಗಳ ವ್ಯವಸ್ಥೆ. ಮೊದಲು ಪ್ರಶ್ನೆಪತ್ರಿಕೆಗಳು ಇಂಗ್ಲಿಷ್‌ನಲ್ಲಿ ಮಾತ್ರ ಇರುತ್ತಿದ್ದವು. ಅದನ್ನು ಯಾರೂ ಬದಲಾವಣೆ ಮಾಡಿರಲಿಲ್ಲ. ಆದರೆ ಎಚ್.ಎನ್. ಮಾಡಿದ ಬದಲಾವಣೆ ಬಹಳ ಮುಖ್ಯವಾದದ್ದು. ಬರೀ ಇಂಗ್ಲಿಷ್‌ನಲ್ಲಿ ಇದ್ದ ಪ್ರಶ್ನೆಪತ್ರಿಕೆಯನ್ನು ಕನ್ನಡದಲ್ಲೂ ತಂದರು. ಎಂದರೆ ಈಗ ಜಾರಿಯಲ್ಲಿರುವ (ಒಂದೇ ಪ್ರಶ್ನೆ ಪತ್ರಿಕೆಯಲ್ಲಿ ಕನ್ನಡ ಮತ್ತು ಇಂಗ್ಲಿಷ್‌ನಲ್ಲಿ ಪ್ರಶ್ನೆಗಳು ಇರುವಂತೆ) ಪದ್ಧತಿ ಎಚ್.ಎನ್. ಅವರ ಪರಿಶ್ರಮದ ಫಲ ಎಂತಲೇ ಹೇಳಬೇಕು.

ಡಾ. ಎಚ್. ನರಸಿಂಹಯ್ಯನವರು ಉಪಕುಲಪತಿಗಳಾಗಿದ್ದಾಗ ಮಾಡಿದ ಇನ್ನೊಂದು ಮುಖ್ಯ ಸಾಧನೆ ಎಂದರೆ, ಪವಾಡಗಳ ಅಸ್ತಿತ್ವವನ್ನು ಕುರಿತು ನಡೆಸಿದ ತನಿಖೆ. ಪವಾಡಗಳನ್ನು ಮಾಡುವ ಅನೇಕ ಸ್ವಾಮೀಜಿಗಳನ್ನು ಸಂದರ್ಶಿಸಿ ಅದರ ಪೊಳ್ಳುತನ ಬಯಲು ಮಾಡಿದ್ದು. ಪುಟ್ಟಪರ್ತಿಯ ಸತ್ಯಸಾಯಿಬಾಬನೊಂದಿಗೆ ವಾಗ್ವಾದ; ಎಚ್.ಎನ್. ಸಾಯಿಬಾಬನಿಗೆ ಸವಾಲೊಡ್ಡಿದ್ದು; ವೈಚಾರಿಕ ಲೇಖನಗಳ ಚರ್ಚೆಯಲ್ಲಿ ವಿವರಿಸಿದ್ದೇನೆ. ಆದರೂ ಎಚ್.ಎನ್. ಅವರು ಸಾಯಿಬಾಬನಿಗೆ ಬರೆದ ಮೂರು ಪತ್ರಗಳಿಗೆ ಉತ್ತರ ಬರದಿದ್ದಾಗ ಅವನ್ನು ಪೇಪರ್‌ಗಳಿಗೆ ಬಿಡುಗಡೆ ಮಾಡಿದರು. ಆ ಪತ್ರಗಳನ್ನು ಇಲ್ಲಿ ಕೋಟ್ ಮಾಡುವುದು ಸೂಕ್ತ ಎನಿಸುವುದರಿಂದ ಅವುಗಳನ್ನು ಹಾಗೇ ನೀಡಿದ್ದೇನೆ:

ಸಾಯಿಕೃಷ್ಣನನ್ನು ಬಹಿರಂಗಗೊಳಿಸಿದ ಮೇಲೆ ಸಹಜವಾಗಿ ನಮ್ಮ ಗಮನವು ವಾಚು, ಪ್ರತಿಮೆ, ಚಿನ್ನದ ಸರವನ್ನು ಸೃಷ್ಟಿಸುವ, ನೀರನ್ನು ಪೆಟ್ರೋಲಾಗಿ ಪರಿವರ್ತಿಸುವ, ವಾಸಿಯಾಗದ ರೋಗಗಳನ್ನು ವಾಸಿಮಾಡುವ ಇಂಥ ಎಲ್ಲ ಬಗೆಯ ಶಕ್ತಿಗಳನ್ನು ಪಡೆದಿರುವುದಾಗಿ ಪ್ರಸಿದ್ಧರಾದ ಶ್ರೀ ಸತ್ಯಸಾಯಿಬಾಬ ಅವರ ಕಡೆಗೆ ತಿರುಗಿತು. ಇವರು

ತಮ್ಮ ಉತ್ಸಾಹಿ ಅನುಯಾಯಿಗಳಿಂದ ದೇವರು ಅಥವಾ ದೇವಮಾನವರೆಂದು ಪರಿಗಣಿತರಾದವರು. ಇವರು ಪವಾಡ ನಡೆಸುವುದಕ್ಕಾಗಿ ರಾಷ್ಟ್ರೀಯವಾಗಿ ಮತ್ತು ಅಂತಾರಾಷ್ಟ್ರೀಯವಾಗಿ ಪ್ರಸಿದ್ಧರಾದವರು. ಇವರು ನಡೆಸುವ ಅನೇಕ ಶಿಕ್ಷಣ ಸಂಸ್ಥೆಗಳಲ್ಲಿ, ಬೆಂಗಳೂರಿನಿಂದ ಎಂಟು ಮೈಲಿ ದೂರದ ವೈಟ್‌ಫೀಲ್ಡ್‌ನಲ್ಲಿರುವ ಕಾಲೇಜು ಮತ್ತು ಅಲ್ಲಿಯೇ ಇರುವ ಅವರ ವಾಸಸ್ಥಳವೂ ಸೇರಿದೆ. ಇವರಿಗೆ ಸಾಕಷ್ಟು ಸಂಖ್ಯೆಯ ಅನುಯಾಯಿಗಳಿದ್ದು ಅವರಲ್ಲಿ ಬಹಳಷ್ಟು ಜನರು ಸಾರ್ವಜನಿಕ ಜೀವನದಲ್ಲಿ ಉನ್ನತ ಸ್ಥಾನಗಳನ್ನು ಹೊಂದಿದವರು. ಅವರ ಅನುಯಾಯಿಗಳಲ್ಲಿ ಕೆಲವು ಸುಪ್ರಸಿದ್ಧ ವಿಜ್ಞಾನಿಗಳೂ ಇದ್ದಾರೆ. ಆದ್ದರಿಂದ ಸಹಜವಾಗಿ ಸಮಿತಿಯು ತನ್ನ ಗಮನವನ್ನು ಇಂಥ ದೇವಮಾನವರ ಮೇಲೆ ಕೇಂದ್ರೀಕರಿಸಬೇಕಾಯಿತು.

ವಿಜ್ಞಾನದ ವಿಧಾನಗಳನ್ನು ಉಪಯೋಗಿಸಿ ನಿಯಂತ್ರಿತ ಪರಿಸ್ಥಿತಿಗಳಲ್ಲಿ ಅವರ ಮೇಲೆ ತನಿಖೆ ನಡೆಸುವುದಕ್ಕೆ ಅವರ ಸಹಕಾರಕ್ಕಾಗಿ ವಿನಂತಿಸಿಕೊಂಡು ಶ್ರೀ ಸತ್ಯಸಾಯಿಬಾಬಾ ಅವರಿಗೆ ಸಮಿತಿಯ ಚೇರಮನ್ನರೂ ಆದ ಎಚ್ಚೆನ್ ಅವರು ಮೂರು ಪತ್ರಗಳನ್ನು ಬರೆದರು.

**ಮೊದಲ ಪತ್ರ (ಅಂಡರ್ ಸರ್ಟಿಫಿಕೆಟ್ ಆಫ್ ಪೋಸ್ಟಿಂಗ್)**

ಬೆಂಗಳೂರು ವಿಶ್ವವಿದ್ಯಾಲಯ
ನಂ. ವಿಸಿಪಿ ೭೩/೭೬,

ದಿನಾಂಕ ೭ನೆಯ ಜೂನ್ ೧೯೭೬,

ಇವರಿಗೆ

ಶ್ರೀ ಸತ್ಯಸಾಯಿಬಾಬ,
ಬೃಂದಾವನ, ಕಾಡಗೋಡಿ ಪೋಸ್ಟ್
ವೈಟ್‌ಫೀಲ್ಡ್, ಬೆಂಗಳೂರು ಜಿಲ್ಲೆ

ಪ್ರೀತಿಯ ಸ್ವಾಮಿಜಿ,

ನಿಮಗೆ ಗೊತ್ತಿರುವಂತೆ ನಮ್ಮ ದೇಶದಲ್ಲಿ ಸಾಕಷ್ಟು ಜನರು ತಮ್ಮಲ್ಲಿ ಪವಾಡ ನಡೆಸುವ ಶಕ್ತಿಯಿರುವುದಾಗಿ ಸಾರಿಕೊಂಡಿದ್ದಾರೆ. ಅವರಲ್ಲೇ ಕೆಲವರು ಶೂನ್ಯದಿಂದ ವಸ್ತುಗಳನ್ನು ಸೃಷ್ಟಿಸುವರೆಂಬುದನ್ನು ಸಹ ನಂಬಲಾಗಿದೆ. ಶೂನ್ಯದಿಂದ ವಸ್ತುಗಳನ್ನು ಸೃಷ್ಟಿಸುವುದು ವಿಜ್ಞಾನದ ಎಲ್ಲ ನಿಯಮಗಳನ್ನು ಉಲ್ಲಂಘಿಸುವ ಅಸಹಜ ಚಮತ್ಕಾರ ಎಂಬ ವಿಚಾರದಲ್ಲಿ ನೀವು ನನ್ನೊಂದಿಗೆ ಸಹಮತಿಸುವುದಾಗಿ ನನಗೆ ಖಚಿತವಿದೆ. ವಾಸ್ತವವಾಗಿ ಜಗತ್ತಿನಾದ್ಯಂತ ಇಲ್ಲಿಯವರೆಗೆ ವಿಜ್ಞಾನ ಕ್ಷೇತ್ರದಲ್ಲಿ ನಡೆದಿರುವ ಎಲ್ಲ ಸಂಶೋಧನೆಗಳು ಮತ್ತು ಆವಿಷ್ಕಾರಗಳು ಈ ಚಮತ್ಕಾರಗಳಿಗೆ ಹೋಲಿಸಿದರೆ ಮಂದವಾಗಿ ನಿಕೃಷ್ಟವೆನಿಸಿವೆ. ಸಹಜವಾಗಿಯೇ ನಮ್ಮಲ್ಲಿ ಅನೇಕರು ಈ ಅಸಾಮಾನ್ಯ ಚಮತ್ಕಾರಗಳ ಕುರಿತು ಗಂಭೀರವಾಗಿ ಆಲೋಚನೆಗೆ ತೊಡಗಿದ್ದೇವೆ. ಅಲ್ಲದೆ ನಮ್ಮ

ರಾಷ್ಟ್ರವು ಅನೇಕ ಮೂಢನಂಬಿಕೆಗಳಲ್ಲಿ ಮುಳುಗಿದ್ದು ಜನರ ಮೇಲೆ ಇವುಗಳ ಆಘಾತಕಾರಿ ಪರಿಣಾಮಗಳ ವಿಷಯದಲ್ಲಿ ನಾವು ತುಂಬಾ ಚಿಂತಿತರಾಗಿದ್ದೇವೆ.

ಇತ್ತೀಚಿಗೆ ಬೆಂಗಳೂರು ವಿಶ್ವವಿದ್ಯಾಲಯವು ಪವಾಡಗಳು ಮತ್ತು ಇತರ ಪ್ರಮಾಣಿಸಿ ನೋಡಬಹುದಾದ ಮೂಢನಂಬಿಕೆಗಳನ್ನು ವೈಚಾರಿಕವಾಗಿ ಮತ್ತು ವೈಜ್ಞಾನಿಕವಾಗಿ ತನಿಖೆ ನಡೆಸಲು ಒಂದು ಸಮಿತಿಯನ್ನು ನಿಯಮಿಸಿದೆ. ಈ ತನಿಖೆಯು ದೇವರು ಅಥವಾ ಧರ್ಮದ ವಿರುದ್ಧವಲ್ಲ.

ಸಮಿತಿಯ ಸದಸ್ಯರು ವಿವಿಧ ಕ್ಷೇತ್ರಗಳಿಗೆ ಸಂಬಂಧಪಟ್ಟವರಾಗಿದ್ದು ಇಂಥ ತನಿಖೆಗಳನ್ನು ನಡೆಸುವುದಕ್ಕಾಗಿ ಸಾಕಷ್ಟು ಸಮರ್ಥರಾಗಿದ್ದಾರೆ. ಜನರಿಗೆ ಪವಾಡ ಮತ್ತು ಮೂಡನಂಬಿಕೆಗಳಲ್ಲಿರಬಹುದಾದ ಸತ್ಯಾಂಶಗಳನ್ನು ತಿಳಿಸುವುದು ಈ ತನಿಖೆಯ ಉದ್ದೇಶವೇ ಹೊರತು ಬೇರೇನೂ ಅಲ್ಲ.

ನಿಮ್ಮ ಅದ್ಭುತ ಶಕ್ತಿಗಳ ಕುರಿತು ತಾವು ಸಾಕಷ್ಟು ಕೇಳಿದ್ದೇವೆ. ವಾಸ್ತವವಾಗಿ ನೀವು ನಿಮಗೆ ಕೊಡಮಾಡಲ್ಪಟ್ಟಿರುವ ದಿವ್ಯಶಕ್ತಿಗಳಿಗಾಗಿ ಆ ಶಕ್ತಿಗಳು ನಿಮಗೆ ಅದ್ಭುತಗಳನ್ನು ನಡೆಸಲು ಅದರಲ್ಲೂ ವ್ಯಾಪಕವಾಗಿ ಪ್ರಸಿದ್ಧವಾಗಿರುವ ಶೂನ್ಯದಿಂದ ವಸ್ತುಗಳನ್ನು ಸೃಷ್ಟಿಸಲು ಕಾರಣವಾಗಿವೆ ಎಂಬುದಕ್ಕಾಗಿ ರಾಷ್ಟ್ರೀಯವಾಗಿ ಮತ್ತು ಅಂತಾರಾಷ್ಟ್ರೀಯವಾಗಿ ಪ್ರಸಿದ್ಧರಾಗಿದ್ದೀರಿ. ನೀವು ಧರ್ಮ ಪ್ರಸಾರ ಮತ್ತು ಸತ್ಯಕ್ಕೆ ಪ್ರಾಧಾನ್ಯ ನೀಡುವಲ್ಲಿಯೂ ಸಹ ಪ್ರಸಿದ್ಧರಾಗಿದ್ದೀರಿ. ಆದ್ದರಿಂದ ನೀವು ನನಗೆ ಮತ್ತು ಸಮಿತಿಯ ಸದಸ್ಯರಿಗೆ ನಿಮ್ಮನ್ನು ಭೇಟಿಯಾಗುವ ಮತ್ತು ಈ ಎಲ್ಲ ವಿಷಯಗಳನ್ನು ಕುರಿತು ನಿಮ್ಮೊಂದಿಗೆ ಚರ್ಚಿಸುವ ಮತ್ತು ಚನ್ನಾಗಿ ಪ್ರತಿಷ್ಠಾಪಿತವಾದ ವಿಜ್ಞಾನದ ನಿಯಮಗಳ ಅನುಸಾರ ನಿಯಂತ್ರಿತ ಪರಿಸ್ಥಿತಿಗಳಲ್ಲಿ ಈ ಚಮತ್ಕಾರಗಳನ್ನು ತನಿಖೆ ಮಾಡುವ ಅವಕಾಶವನ್ನು ನೀಡಿದರೆ ನಾನು ನಿಮಗೆ ತುಂಬಾ ಕೃತಜ್ಞನಾಗಿರುತ್ತೇನೆ. ನಿಮ್ಮಷ್ಟು ಯೋಗ್ಯತೆಯುಳ್ಳ ವ್ಯಕ್ತಿ, ಅಪರೂಪದ ದಿವ್ಯಶಕ್ತಿಗಳನ್ನು ಒಂದು ವೇಳೆ ಹೊಂದಿದ್ದರೂ, ನಾವು ನಮ್ಮ ದೇಶದ ಮತ್ತು ಹೊರದೇಶಗಳ ಹೆಚ್ಚಿನ ಸಂಖ್ಯೆಯ ಜನರಿಗೆ ಅತ್ಯಂತ ಪ್ರಯೋಜನವುಳ್ಳ, ಅರ್ಥಪೂರ್ಣವಾದ ತನಿಖೆಗಳನ್ನು - ಕೆಲವೊಮ್ಮೆ ದೇವರಿಗೆ ಸಮಾನವೆಂದು ಪರಿಗಣಿಸಲ್ಪಡುವ ಸತ್ಯದ ಹೆಸರಿನಲ್ಲಿ ನಡೆಸಲು - ನಿಮ್ಮ ಸಂಪೂರ್ಣವಾದ ಸಹಕಾರವನ್ನು ನೀಡುತ್ತೀರೆಂಬುದರಲ್ಲಿ ನನಗೆ ಎಳ್ಳಷ್ಟು ಸಂದೇಹವಿಲ್ಲ.

ನಿಮ್ಮನ್ನು ಕಾಣುವ ಸಂತೋಷದ ಮತ್ತು ಸೌಲಭ್ಯದ ಅವಕಾಶಕ್ಕಾಗಿ ದಯವಿಟ್ಟು, ಸ್ಥಳ, ದಿನಾಂಕ, ವೇಳೆಗಳನ್ನು ನನಗೆ ತಿಳಿಸಬೇಕೆಂದು ವಿನಂತಿಸಿಕೊಳ್ಳುತ್ತೇನೆ.

ಗೌರವಪೂರ್ವಕ ಕೃತಜ್ಞತೆಗಳು

ನಿಮ್ಮ ವಿಶ್ವಾಸದ
ಎಚ್. ನರಸಿಂಹಯ್ಯ
ಉಪಕುಲಪತಿಗಳು ಮತ್ತು ಛೇರಮನ್
ಪವಾಡ ಮತ್ತು ಮೂಢನಂಬಿಕೆಗಳ ತನಿಖಾ ಸಮಿತಿ

**ಎರಡನೆಯ ಪತ್ರ (ಅಂಡರ್ ಸರ್ಟಿಫಿಕೇಟ್ ಆಫ್ ಪೋಸ್ಟಿಂಗ್)**

ದಿನಾಂಕ ೧೬ನೇ ಜೂನ್ ೧೯೭೬.

ನಂ ವಿಸಿಪಿ ೯೯/೭೬

ಪ್ರೀತಿಯ ಸ್ವಾಮೀಜಿ,

ನನ್ನ ೧೯೭೬ ಜೂನ್ ಎರಡನೆಯ ತಾರೀಖಿನ ಪತ್ರ ನಿಮಗೆ ತಲುಪಿರಬೇಕೆಂದು ಆಶಿಸುತ್ತೇನೆ. ನಿಮ್ಮಿಂದ ಯಾವುದೇ ಉತ್ತರ ಬರಲಿಲ್ಲ ಎಂದು ತಿಳಿಯಪಡಿಸಲು ವಿಷಾದಿಸುತ್ತೇನೆ. ದಯವಿಟ್ಟು ನೀವು ಈ ಪತ್ರಕ್ಕೆ ನಿಮಗೆ ಸಾಧ್ಯವಾದಷ್ಟು ಬೇಗ ಅನುಕೂಲ ಮಾಡಿಕೊಂಡು ಉತ್ತರಿಸಿ. ನಿಮ್ಮನ್ನು ನಾವು ಕಾಣಬೇಕಾದ ಸ್ಥಳ, ದಿನಾಂಕ ಮತ್ತು ವೇಳೆಗಳನ್ನು ನಮಗೆ ತಿಳಿಸಿದರೆ ನಾನು ನಿಮಗೆ ಋಣಿಯಾಗಿರುತ್ತೇನೆ. ನಿಮ್ಮ ಸಿದ್ಧ ಆಧಾರಕ್ಕೆ ಹಿಂದಿನ ಪತ್ರದ ಪ್ರತಿಯೊಂದನ್ನು ಲಗತ್ತಿಸಲಾಗಿದೆ.

ಗೌರವಪೂರ್ವಕ ಕೃತಜ್ಞತೆಗಳು

ನಿಮ್ಮ ವಿಶ್ವಾಸದ

ಎಚ್. ನರಸಿಂಹಯ್ಯ

**ಮೂರನೆಯ ಪತ್ರ (ಅಂಡರ್ ಸರ್ಟಿಫಿಕೇಟ್ ಆಫ್ ಪೋಸ್ಟಿಂಗ್)**

ನಂ. ವಿಸಿಪಿ ೧೩೪/೭೬

ದಿನಾಂಕ ಜುಲೈ ೫, ೧೯೭೬.

ಪ್ರೀತಿಯ ಸ್ವಾಮೀಜಿ,

ನನ್ನ ೧೯೭೬ ಜೂನ್ ೭ನೆಯ ತಾರಿಖಿನ ಪತ್ರಕ್ಕೆ ನಿಮ್ಮಿಂದ ಉತ್ತರ ಇಲ್ಲದಿರುವುದು ಅತ್ಯಂತ ವಿಷಾದದ ಸಂಗತಿಯಾಗಿದೆ. ೧೯೭೬ರ ಜೂನ್ ೧೬ರ ಜ್ಞಾಪನ ಪತ್ರವೂ ನಿರೀಕ್ಷಿತ ಪರಿಣಾಮಗಳನ್ನು ಉಂಟುಮಾಡಲಿಲ್ಲ.

ನೀವು ಪವಾಡಗಳನ್ನು ನಡೆಸುತ್ತೀರೆಂಬ ನಂಬಿಕೆಯ ಮೇಲೆ ನಿಮ್ಮ ಸುತ್ತ ಪ್ರಭಾವಲಯ ನಿರ್ಮಾಣವಾಗಿದೆ. ನಿಮ್ಮ ಪವಾಡ ಕಾಲ್ಪನಿಕವೆಂದು ಸಿದ್ಧವಾದ ಗಳಿಗೆಗೆ ನೀವೂ ಒಬ್ಬ ಸಾಮಾನ್ಯ ಮನುಷ್ಯರಾಗುತ್ತೀರೆಂಬುದು ನಿಮಗೆ ಗೊತ್ತಿದೆ. ಆದ್ದರಿಂದ ನೀವು ಆ ಪ್ರಭಾವಳಿಯನ್ನು ತೆಗೆದು ಹಾಕುವ ಎಲ್ಲ ಪ್ರಯತ್ನಗಳಿಂದ ನುಣುಚಿಕೊಳ್ಳುವುದನ್ನು ಅತ್ಯಂತ ತಾರ್ಕಿಕವಾದ ರೀತಿಯಲ್ಲಿ ಅನುಸರಿಸುತ್ತಿರುವಂತೆ ಕಾಣುತ್ತಿದೆ. ನಿಮ್ಮ ಅಸಹಕಾರಕ್ಕೆ ಬೆಂಬಲವಾಗಿ ಈ ಕೆಲ ವಾದಗಳು ಎದುರಿಗಿರಬಹುದು. ''ಇಂತಹ ಮಹಾವ್ಯಕ್ತಿ, ದೇವರು, ಮರ್ತ್ಯಜೀವಿಗಳಿಂದ ಇಂತಹ ತನಿಖೆಗಳಿಗೆ ಒಳಪಡುವುದು ಹೇಗೆ? ಇಂತಹ ಕಟ್ಟಳೆಗೆ ಅವರು ಅಧೀನರಲ್ಲ.'' ಈ ವಾದಗಳು ಅಸಮರ್ಥನೀಯವೆಂದು ಹೇಳುವುದು ಅತ್ಯಗತ್ಯ.

ಒಬ್ಬ ವ್ಯಕ್ತಿ ತಾನು ಹೇಳುವುದನ್ನು ಸಮರ್ಥಿಸಿಕೊಳ್ಳಬೇಕು. ಮತ್ತು ತಾನು ಮಾಡುವುದನ್ನು ವಿವರಿಸಬೇಕು. ಇದು ಒಬ್ಬ ಸಭ್ಯ ಮನುಷ್ಯನಿಂದ ನಿರೀಕ್ಷಿಸಬಹುದಾದ ಪ್ರಾಥಮಿಕ ಅಗತ್ಯ.

ದೊಡ್ಡ ಸಂಖ್ಯೆಯ ಜನರನ್ನು ದಾರಿ ತಪ್ಪಿಸುವುದು ಅಥವಾ ವಂಚಿಸುವುದು ಕಠಿಣವಲ್ಲ. ಆದರೆ ಯಾವುದೇ ವ್ಯಕ್ತಿ ತನ್ನ ಆತ್ಮಸಾಕ್ಷಿಯನ್ನು ವಂಚಿಸಲಾರ. ಇದು ನಿಮಗೆ ಚನ್ನಾಗಿ ಗೊತ್ತು. ನಮ್ಮೆಲ್ಲ ಕ್ರಿಯೆಗಳಿಗೂ ಸದಾ ಜಾಗೃತ, ಸದಾ ಪ್ರತ್ಯಕ್ಷ ಸಾಕ್ಷಿ - ನಮ್ಮ ಆತ್ಮ ಸಾಕ್ಷಿಯೇ. ಯಾರೇ ಆಗಲಿ ತಮ್ಮ ಸ್ವಂತ ಆತ್ಮಸಾಕ್ಷಿಗೆ ಪ್ರಾಮಾಣಿಕವಾಗಿರಬೇಕು. ವಾಸ್ತವವಾಗಿ ಇದು ನಮ್ಮೆಲ್ಲರ ಕ್ರಿಯಾನೀತಿಯಾಗಿರಬೇಕು. ಹೆಚ್ಚು ದೈವಿಕವಾದ ವ್ಯಕ್ತಿ ಆತ್ಮಸಾಕ್ಷಿಯ ವ್ಯಕ್ತಿತ್ವ ಮತ್ತು ಅದಕ್ಕೆ ಪ್ರಾಮಾಣಿಕನಾಗಿರಬೇಕಾದ ಅಗತ್ಯಗಳ ವಿಷಯದಲ್ಲಿ ಹೆಚ್ಚು ಪ್ರಜ್ಞಾಶಾಲಿಯಾಗಿರಬೇಕು.

ಮಹಾನ್ ದೈವಿಕ ವ್ಯಕ್ತಿಗಳು ಯಾವತ್ತೂ ತಮ್ಮ ಕೃತಿ ಮತ್ತು ಮಾತುಗಳನ್ನು ವಿಶದಗೊಳಿಸುವುದನ್ನು ಜೀವನ ಧ್ಯೇಯವಾಗಿಸಿಕೊಂಡಿದ್ದಾರೆ. ಭಗವಾನ್ ಬುದ್ಧ, ಸ್ವಾಮಿ ವಿವೇಕಾನಂದ ಮತ್ತು ಮಹಾತ್ಮ ಗಾಂಧಿ ಇವರು ತಮ್ಮನ್ನು ಪರೀಕ್ಷೆ ಮತ್ತು ಪ್ರಮಾಣೀಕರಣದ ನಂತರವೇ ಸ್ವೀಕರಿಸಬೇಕೆಂದು ತಮ್ಮ ಅನುಯಾಯಿಗಳನ್ನು ಒತ್ತಾಯಿಸಿದ್ದಾರೆ. ಅವರ ಬದುಕು ತೆರೆದ ಪುಸ್ತಕಗಳು. ಅವರು ಯಾವುದೇ ಸಮಸ್ಯೆಯನ್ನು ತೀರ ಸಣ್ಣದೆಂದು ಪರಿಗಣಿಸುತ್ತಿರಲಿಲ್ಲ. ಅವರು ಎಲ್ಲ ಸಮಸ್ಯೆಗಳಿಗೂ ಉತ್ತರಿಸಿದ್ದಾರೆ. ಮತ್ತು ಪ್ರತಿಯೊಂದು ಕ್ರಿಯೆಯನ್ನು ಪ್ರತ್ಯಕ್ಷ ಆಚರಣೆಯಲ್ಲಿ ತೋರಿಸಿದ್ದಾರೆ. ಅವರು ನಿರಂಹಕಾರಿಗಳೂ ಸರಳರೂ ಆಗಿದ್ದು ಬಡವರು ಮತ್ತು ಕೆಳತುಳಿಯಲ್ಪಟ್ಟವರ ನಡುವೆ ಬದುಕಿದವರು. ಈ ದೈವಿಕ ವ್ಯಕ್ತಿಗಳು ರಹಸ್ಯವಾಗಿ ನಡೆಸಿದ್ದು ಏನಾದರೂ ಇತ್ತೇ? ನಿಮ್ಮ ಜೀವನ ವಿಧಾನ ಈ ಮಹಾನ್ ಜೀವಿಗಳಷ್ಟೇ ಅಲ್ಲ ನಿಜವಾದ ಧಾರ್ಮಿಕರು ಮತ್ತು ದಿವ್ಯ ವ್ಯಕ್ತಿಗಳು ನಡೆಸಿದ ಜೀವನಕ್ಕೂ ಅಪವಾದವಾಗಿ ತೋರುತ್ತದೆ. ಸತ್ಯ ಬಲಿಯಾದಂತೆ ಕಾಣುತ್ತದೆ. ಮತ್ತು ರಹಸ್ಯವನ್ನೇ ನೀವೊಂದು ವೈಶಿಷ್ಟ್ಯವಾಗಿಸಿಕೊಂಡಂತೆ ತೋರುತ್ತದೆ. ಎಲ್ಲ ಮಹಾ ವ್ಯಕ್ತಿಗಳು ಮತ್ತು ಧಾರ್ಮಿಕ ಪುರುಷರು ಸತ್ಯವೇ ದೇವರು ಮತ್ತು ರಹಸ್ಯವು ಪಾಪವೆಂದು ಸಾರಿದ್ದಾರೆ.

ಗೌರವಾರ್ಹ ಪರಂಪರೆಯುಳ್ಳ ನಮ್ಮ ರಾಷ್ಟ್ರದಲ್ಲಿ ಜೀವನದ ಸಮಸ್ಯೆಗಳನ್ನು ಧೈರ್ಯದಿಂದ ಎದುರಿಸಲಾರದೆ ಸುಲಭವಾಗಿ ಮೋಸಹೋಗುವ ಮತ್ತು ಚಮತ್ಕಾರಗಳು ಹಾಗೂ ಕುತಂತ್ರಗಳಿಗೆ ಮೂಢ ಬಲಿಯಾಗುವ ಜನರು ನಿರಂತರವಾಗಿ ಆಧ್ಯಾತ್ಮದ ಹೆಸರಿನಲ್ಲಿ ಶೋಷಣೆಗೆ ಒಳಗಾಗುತ್ತಿರುವುದು ದುರದೃಷ್ಟದ ಸಂಗತಿಯಾಗಿದೆ.

ನಿಮ್ಮನ್ನು ದೂಷಿಸುವುದು ಅಥವಾ ನಿಮ್ಮ ಭಾವನೆಗಳನ್ನು ನೋಯಿಸುವುದು ಈ ಪತ್ರದ ಉದ್ದೇಶವಲ್ಲ. ಅದೇ ಸಂದರ್ಭದಲ್ಲಿ ಇಂತಹ ವಿಷಯಗಳಲ್ಲಿ ಬೆಂಗಳೂರು

ವಿಶ್ವವಿದ್ಯಾಲಯದ ಸತ್ಯಾನ್ವೇಷಣೆಯ ಆಳವಾದ ಕಾಳಜಿಯನ್ನು ನೀವು ಮೆಚ್ಚಿಕೊಳ್ಳುವ ಹಾಗೆ ಪತ್ರವು ಸಾಕಷ್ಟು ಪ್ರಭಾವಶಾಲಿಯಾಗಿರಬೇಕೆಂದು ನನ್ನ ಭಾವನೆಯಾಗಿದೆ.

ಇದು ಈ ಸರಣಿಯಲ್ಲಿ ನಾನು ನಿಮಗೆ ಬರೆಯುತ್ತಿರುವ ಕೊನೆಯ ಪತ್ರ. ೧೯೭೬ ಜುಲೈ ೧೯ರ ಒಳಗೆ ನಿಮ್ಮಿಂದ ಉತ್ತರ ಬರದೆ ಹೋದರೆ ಈ ವಿಷಯದಲ್ಲಿ ನೀವು ಹೇಳುವುದು ಏನೂ ಇಲ್ಲವೆಂದು ಭಾವಿಸಿ ನಾನು ಈ ಪತ್ರಗಳನ್ನು ಪತ್ರಿಕೆಗಳಿಗೆ ಬಿಡುಗಡೆ ಮಾಡುವ ಒತ್ತಡಕ್ಕೆ ಗುರಿಯಾಗಬಹುದು.

ನೀವು ನನ್ನ ವಿನಂತಿಯನ್ನು ಒಪ್ಪಿಕೊಳ್ಳುವ ನೈತಿಕ ಧೈರ್ಯವನ್ನು ಪ್ರದರ್ಶಿಸಬಹುದೆಂದು ನಾನು ಈಗಲೂ ಆಶಿಸುತ್ತೇನೆ.

ನಿಮ್ಮ ವಿಶ್ವಾಸದ

ಎಚ್. ನರಸಿಂಹಯ್ಯ

ವಿಶ್ವವಿದ್ಯಾಲಯದಲ್ಲಿ ತಾವಿರುವತನಕ ಅಧ್ಯಯನಾಂಗಗಳಲ್ಲಿ, ಆಡಳಿತಾಂಗದಲ್ಲಿ ಬೇಕಾದಷ್ಟು ಸುಧಾರಣೆಗಳನ್ನು ತಂದಿದ್ದಾರೆ. ಅವುಗಳನ್ನು ಹೀಗೆ ಒಂದೊಂದಾಗಿ ಹೇಳುತ್ತ ಹೋದರೆ ದೊಡ್ಡ ಪಟ್ಟಿಯೇ ಬೆಳೆಯುತ್ತ ಹೋಗುತ್ತದೆ.

ಆದರೆ ದುರಾದೃಷ್ಟವಶಾತ್ ಸಾಯಿಬಾಬ ಮತ್ತು ಅಂಥವರ ರಾಜಕೀಯ ಒತ್ತಡಗಳಿಂದ ವಿದ್ಯಾರ್ಥಿಗಳ ಗಲಾಟೆಯಿಂದ ಎಚ್.ಎನ್. ಅವರ ಪ್ರಾಮಾಣಿಕತೆಗೆ, ಕಾರ್ಯ ತತ್ಪರತೆಗೆ ಧಕ್ಕೆಯುಂಟಾಯಿತು. ಅದರಿಂದ ಬೇಸತ್ತ ಎಚ್.ಎನ್. ೧೯೭೭ರಲ್ಲಿ ತಮ್ಮ ಉಪಕುಲಪತಿ ಸ್ಥಾನಕ್ಕೆ ರಾಜಿನಾಮೆ ಸಲ್ಲಿಸಿದರು. ಇದರಿಂದ ವಿಶ್ವವಿದ್ಯಾಲಯಕ್ಕೆ ನಷ್ಟವೇ ಹೊರತು ಎಚ್.ಎನ್. ಅವರಿಗಲ್ಲ ಎಂಬುದು ಅನೇಕರಿಗೆ ಆನಂತರವಾದರೂ ಅರಿವಾಗಿದೆ.

## ನ್ಯಾಷನಲ್ ವಿದ್ಯಾಸಂಸ್ಥೆಯ ಅಧ್ಯಕ್ಷರಾಗಿ

ನ್ಯಾಷನಲ್ ವಿದ್ಯಾಸಂಸ್ಥೆಯ ಕೇಂದ್ರಬಿಂದುವಾಗಿರುವ ಡಾ. ಎಚ್.ಎನ್. ಅವರು ಬೆಂಗಳೂರು ವಿಶ್ವವಿದ್ಯಾಲಯದ ಕುಲಪತಿಯ ಸ್ಥಾನಕ್ಕೆ ರಾಜಿನಾಮೆ ನೀಡಿ ಪುನಃ ನ್ಯಾಷನಲ್ ಕಾಲೇಜಿಗೆ ಹಿಂದಿರುಗಿದರು. ನ್ಯಾಷನಲ್ ಕಾಲೇಜು ಅವರಿಗೆ ಒಂದು ರೀತಿ ತವರುಮನೆ ಇದ್ದಹಾಗೆ. ಅಧ್ಯಾಪಕರಾಗಿ, ಪ್ರಾಂಶುಪಾಲರಾಗಿ ವಿದ್ಯಾಸಂಸ್ಥೆಯಲ್ಲಿ ದುಡಿದ ಕಾರ್ಯ ಚಟುವಟಿಕೆಗಳ ಹಿನ್ನೆಲೆಯಲ್ಲಿ ಅವರನ್ನು ಅಧ್ಯಕ್ಷಗಿರಿ ಪಟ್ಟಕ್ಕೆ ಕೂರಿಸಲಾಯಿತು, ಎಲ್ಲರ ಸರ್ವಾನುಮತದಿಂದ.

ಅಧ್ಯಕ್ಷರಾದ ಮೇಲೆ ನ್ಯಾಷನಲ್ ಎಜುಕೇಷನ್ ಸೊಸೈಟಿಯಲ್ಲಿ ಇನ್ನೂ ಅನೇಕ ಸುಧಾರಣೆಗಳ ಜೊತೆಗೆ ಉಪಯುಕ್ತ ಹೊಸ ವಲಯಗಳನ್ನು ಸೃಷ್ಟಿಸಿದರು. ಇವು ಸಾರ್ವಜನಿಕರಿಗೂ ಪ್ರಯೋಜನ ನೀಡಬಲ್ಲವುಗಳಾಗಿವೆ. ಸಾಮಾನ್ಯ ಜನರಿಗೆ ಆಧುನಿಕ ವಿಜ್ಞಾನದ ಬೆಳವಣಿಗೆಯನ್ನು ಪರಿಚಯ ಮಾಡಿಕೊಡಲು ಮತ್ತು ಅವರಲ್ಲಿ ವೈಜ್ಞಾನಿಕ

ಮನೋಭಾವ ಬೆಳೆಸಲು ''ಸೈನ್ಸ್ ಫೋರಂ'' ಎನ್ನುವ ಸಂಸ್ಥೆಯನ್ನು ಬಸವನಗುಡಿ ನ್ಯಾಷನಲ್ ಕಾಲೇಜಿನಲ್ಲಿ ಹುಟ್ಟುಹಾಕಿದರು. ಅದು ಇಂದು ಜ್ಞಾನ ಪ್ರಸಾರದ ಕೇಂದ್ರವಾಗಿ ಬೆಳೆದು ನಿಂತಿದೆ. ಸಾಮಾನ್ಯ ಜನರಿಗೆ ಲಲಿತ ಕಲೆಗಳಲ್ಲಿ ಆಸಕ್ತಿ ಮೂಡಿಸಲು ಮತ್ತು ಜನಸಾಮಾನ್ಯರಿಗೆ ಉತ್ತಮ ಮಟ್ಟದ ಮನರಂಜನೆ ನೀಡಲು ''ಲಲಿತ ಕಲಾ ಪರಿಷತ್'' ಅನ್ನು ಸ್ಥಾಪಿಸಿದರು, ಜಯನಗರ ನ್ಯಾಷನಲ್ ಕಾಲೇಜಿನಲ್ಲಿ.

ಇದೇ ಸಮಯದಲ್ಲಿ ಗ್ರಾಮೀಣ ಪ್ರದೇಶದಲ್ಲಿ ನ್ಯಾಷನಲ್ ಸ್ಕೂಲ್‌ಗಳನ್ನು ತೆರೆಯಲು ಕಾರಣೀಭೂತರಾದರು. ಗೌರಿಬಿದನೂರು, ಬಾಗೇಪಲ್ಲಿ, ಹೊಸೂರು, ಯಲ್ಲೂರು, ಮಡಿಯನೂರು ಮತ್ತು ಸುಬ್ರಮಣ್ಯಪುರಗಳಲ್ಲಿ ಇಂದು ನ್ಯಾಷನಲ್ ಸ್ಕೂಲು, ಕಾಲೇಜುಗಳು ತಲೆ ಎತ್ತಿ ನಿಂತಿವೆ.

ಡಾ. ಎಚ್.ಎನ್. ಅವರ ಇಡೀ ಜೀವನವೇ ನ್ಯಾಷನಲ್ ಎಜ್ಯುಕೇಷನ್ ಸೊಸೈಟಿಗೆ ಮತ್ತು ಇದರಡಿಯಲ್ಲಿರುವ ನಾಲ್ಕು ಕಾಲೇಜು, ಐದು ಹೈಸ್ಕೂಲು ಎರಡು ಪ್ರೈಮರಿ ಸ್ಕೂಲುಗಳಿಗೆ ಮೀಸಲಾಗಿದೆ. ಅವರ ಸರ್ವಸ್ವವನ್ನೇ ಇವುಗಳಿಗೆ ಧಾರೆ ಎರೆದಿದ್ದಾರೆ. ಒಂದು ಬಗೆಯಲ್ಲಿ ನ್ಯಾಷನಲ್ ಎಜುಕೇಷನ್ ಸೊಸೈಟಿಯಲ್ಲಿ ಲೀನವಾಗಿದ್ದಾರೆ. ಡಾ.ಎಚ್. ಎನ್. ಅವರ ಜೀವನ ಚಿತ್ರಣ ಬರೆಯುವುದೆಂದರೆ, ನ್ಯಾಷನಲ್ ಎಜ್ಯುಕೇಷನ್ ಸೊಸೈಟಿಯ ಚಿತ್ರಣ ನೀಡಿದಂತೆ ಆಗುತ್ತದೆ. ನ್ಯಾಷನಲ್ ಎಜ್ಯುಕೇಷನ್ ಸೊಸೈಟಿಯಿಂದ ನರಸಿಂಹಯ್ಯನವರನ್ನು, ನರಸಿಂಹಯ್ಯನವರಿಂದ ನ್ಯಾಷನಲ್ ಎಜ್ಯುಕೇಷನ್ ಸೊಸೈಟಿಯನ್ನು ಬೇರ್ಪಡಿಸಲು ಸಾಧ್ಯವೇ ಇಲ್ಲ.

ಅಧ್ಯಾಪಕರಾಗಿ, ಪ್ರಾಂಶುಪಾಲರಾಗಿ, ಅಮೆರಿಕದಲ್ಲಿ ಸಂದರ್ಶಕ ಪ್ರಾಧ್ಯಾಪಕರಾಗಿ, ಬೆಂಗಳೂರು ವಿ. ವಿ.ಯ ಉಪಕುಲಪತಿಗಳಾಗಿ, ವಿಧಾನ ಪರಿಷತ್ತಿನ ಸದಸ್ಯರಾಗಿ ಹಲವಾರು ಅಧಿಕಾರ ಸ್ಥಾನಗಳಲ್ಲಿದ್ದು ಅದರಿಂದ ಪಡೆದ ವೇತನ ಎಲ್ಲವನ್ನು ಒಂದಿಲ್ಲ ಒಂದು ಕಾರಣಕ್ಕಾಗಿ ನ್ಯಾಷನಲ್ ವಿದ್ಯಾಸಂಸ್ಥೆಗೆ ನೀಡಿದ್ದಾರೆ. ತನಗಾಗಿ ಏನನ್ನು ಮಾಡಿಕೊಳ್ಳದ ಎಚ್.ಎನ್. ಅವರ ಮುಂದಿನ ಆಲೋಚನೆಗಳು ಮತ್ತು ಪೂರ್ವಸಿದ್ಧತೆಯನ್ನು ನೋಡಿದರೆ ಯಾರಿಗಾದರೂ ಆಶ್ಚರ್ಯ ಆಗದೇ ಇರಲಾರದು. ಈಗಾಗಲೇ ಪೂರ್ವಸಿದ್ಧತೆ ಮಾಡಿದ ಒಂದು ಘಟನೆ ಅಂತೂ ಮನ ಮಿಡಿಯುವಂಥದ್ದು.

೨೦೧೭ರಲ್ಲಿ ಆಚರಿಸಲಾಗುವ ಬಸವನಗುಡಿ ನ್ಯಾಷನಲ್ ಹೈಸ್ಕೂಲಿನ ಶತಮಾನೋತ್ಸವಕ್ಕಾಗಿ, ೨೦೧೩ರಲ್ಲಿ ಆಚರಿಸಲಾಗುವ ಹೊಸೂರಿನ ಡಾ. ಎಚ್. ಎನ್. ನ್ಯಾಷನಲ್ ಹೈಸ್ಕೂಲಿನ ಚಿನ್ನದ ಹಬ್ಬಕ್ಕಾಗಿ, ಮತ್ತು ೨೦೧೦ ರಲ್ಲಿ ಆಚರಿಸಲಾಗುವ ಮಹಾತ್ಮಗಾಂಧಿ ನ್ಯಾಷನಲ್ ಹೈಸ್ಕೂಲಿನ ಚಿನ್ನದ ಹಬ್ಬಕ್ಕಾಗಿ ಒಂದೊಂದು ಸಂಸ್ಥೆಗೂ ೫೦೦೦/- ರೂ. ಎಫ್.ಡಿ. ಇಟ್ಟಿದ್ದಾರೆ. ಇವುಗಳ ಚಿನ್ನದ ಹಬ್ಬದ ಸಮಯದ ಹೊತ್ತಿಗೆ ಬಡ್ಡಿ ಚಕ್ರಬಡ್ಡಿಯಿಂದ ಹಣ ಬೇಕಾದಷ್ಟು ಇಮ್ಮಡಿಯಾಗಿರುತ್ತದೆ.

## ಉಯಿಲು

ಡಾ. ಎಚ್.ಎನ್. ಅವರು ''ಐನ್‌ಸ್ಟೀನ್ ಮತ್ತು ದೇವರು'' ಎನ್ನುವ ಲೇಖನದಲ್ಲಿ ಐನ್‌ಸ್ಟೀನರ ಬದುಕನ್ನು ರೂಪಿಸಿದ ಎರಡು ಹೇಳಿಕೆಗಳನ್ನು ನೀಡುತ್ತಾರೆ. ಈ ಹೇಳಿಕೆಗಳೇ ಡಾ. ಎಚ್.ಎನ್. ಅವರನ್ನು ರೂಪಿಸಿವೆ ಎನಿಸುತ್ತದೆ. ಆದ್ದರಿಂದ ಆ ಎರಡು ಹೇಳಿಕೆಗಳನ್ನು ಇಲ್ಲಿ ಮತ್ತೊಮ್ಮೆ ಹೇಳುವುದು ಅನಿವಾರ್ಯ ಎನಿಸುತ್ತದೆ.

೧. ಸಾಮಾನ್ಯ ಮನುಷ್ಯರು ಸಾಧಿಸಬಯಸುವ ಆದರ್ಶಗಳಾದ ಆಸ್ತಿ -ಪಾಸ್ತಿ, ಸುಖಭೋಗ ಮತ್ತು ಬಹಿರಂಗದ ಯಶಸ್ಸುಗಳು ಮೊದಲಿನಿಂದಲೂ ಬಹಳ ತುಚ್ಛವೆಂದು ನನಗೆ ತೋರಿದೆ.

೨. ಯಶಸ್ಸನ್ನು ಸಂಪಾದಿಸಿದ ಮನುಷ್ಯನಾಗಲು ಪ್ರಯತ್ನಿಸಬೇಡ. ಮೌಲ್ಯಗಳಿಗೆ ಬೆಲೆ ಕೊಡುವ ಮನುಷ್ಯನಾಗು.

ಈ ಮಾತುಗಳು ಇಲ್ಲಿ ಹೇಳಲು ಕಾರಣ ಎಚ್.ಎನ್. ಅವರು ಇದುವರೆಗೆ ಯಾವುದೇ ಆಸ್ತಿ ಪಾಸ್ತಿ ಮಾಡಿಲ್ಲ. ಜೀವನಾವಶ್ಯಕತೆಗೆ ಬೇಕಾದಷ್ಟೆ ಖರ್ಚು ಮಾಡುತ್ತ ಬಂದಿದ್ದಾರೆ. ಸರಳ ಜೀವನ ನಡೆಸಿದ್ದಾರೆ. ತಮ್ಮ ಖರ್ಚಿಗಾಗಿ ಒಂದಿಷ್ಟು ಹಣ ಬ್ಯಾಂಕಿನಲ್ಲಿ ಉಳಿಸಿಕೊಂಡಿದ್ದಾರೆ. ಅದೂ ಕೂಡ ಯಾರಿಗೆ ಸೇರಬೇಕೆಂದು ಈಗಾಗಲೇ ಉಯಿಲು ಸಹ ಬರೆದಿದ್ದಾರೆ.

ತಮ್ಮ ಅನಂತರ ತಮ್ಮ ಬ್ಯಾಂಕ್ ಖಾತೆಯಲ್ಲಿರುವ ಎಲ್ಲ ಹಣ, ತಮ್ಮ ಎಲ್ಲ ಪುಸ್ತಕಗಳು, ತಮ್ಮದಾದ ಎಲ್ಲ ಆಸ್ತಿ ನ್ಯಾಷನಲ್ ಎಜ್ಯುಕೇಷನ್ ಸೊಸೈಟಿಗೆ ಸೇರತಕ್ಕದೆಂದು ಉಯಿಲು ಬರೆದಿದ್ದಾರೆ.

## ಸನ್ಮಾನ ಮತ್ತು ಪ್ರಶಸ್ತಿಗಳು

ಡಾ. ಎಚ್.ಎನ್. ಅವರೇ ಒಂದು ಲೇಖನದಲ್ಲಿ ಹೀಗೆ ಹೇಳುತ್ತಾರೆ: ''ಸಾಮಾನ್ಯ ಮನುಷ್ಯರು ಸಾಧಿಸಬಯಸುವ ಆದರ್ಶಗಳಾದ ಆಸ್ತಿ ಪಾಸ್ತಿ, ಸುಖಭೋಗ ಮತ್ತು ಬಹಿರಂಗದ ಯಶಸ್ಸುಗಳು ಮೊದಲಿನಿಂದಲೂ ತನಗೆ ತುಚ್ಛವೆಂದು ತೋರಿದೆ''. ಈ ಮಾತುಗಳೇ ಎಚ್.ಎನ್. ಅವರ ವ್ಯಕ್ತಿತ್ವದ ಪ್ರತಿಬಿಂಬ. ಅದೇ ಲೇಖನದಲ್ಲಿ ''ಯಶಸ್ಸನ್ನು ಸಂಪಾದಿಸಿದ ಮನುಷ್ಯನಾಗಲು ಯತ್ನಿಸಬೇಡ. ಮೌಲ್ಯಗಳಿಗೆ ಬೆಲೆಕೊಡುವ ಮನುಷ್ಯನಾಗು'' ಎಂಬ ಮಾತನ್ನು ಹೇಳುತ್ತಾರೆ. ಈ ಮಾತುಗಳಂತೆ ತಮ್ಮ ಇಡೀ ಜೀವನ ಕಳೆದಿದ್ದಾರೆ. ಎಂದೂ ಯಾವತ್ತೂ ಪ್ರಶಸ್ತಿ ಸನ್ಮಾನಗಳಿಗಾಗಿ ಆಸೆ ಪಟ್ಟವರಲ್ಲ. ಆದರೂ ಅನೇಕ ಪ್ರಶಸ್ತಿಗಳು, ಸನ್ಮಾನಗಳು, ಉನ್ನತ ಸ್ಥಾನಗಳು ಇವರನ್ನು ಹುಡುಕಿಕೊಂಡು ಬಂದಿವೆ.

ತಮ್ಮ ಜೀವನದ ಭವಿಷ್ಯವನ್ನು ಲೆಕ್ಕಿಸದೆ ಭಾರತದ ಸ್ವಾತಂತ್ರ್ಯದ ಹೋರಾಟದಲ್ಲಿ ದೇಶಾಭಿಮಾನದಿಂದ, ನಿಷ್ಠೆಯಿಂದ, ಅರ್ಪಣಾ ಮನೋಭಾವದಿಂದ ಭಾಗವಹಿಸಿದ್ದಕ್ಕೆ

''ತಾಮ್ರ ಪತ್ರದ ಗೌರವ'' ಪ್ರಶಸ್ತಿ ಲಭಿಸಿದೆ. ವಿವಿಧ ಕ್ಷೇತ್ರದಲ್ಲಿನ ಗಣನೀಯ ಸೇವೆಗಾಗಿ ೧೯೬೮ರಲ್ಲಿ 'ರಾಜ್ಯ ಪ್ರಶಸ್ತಿ' ನೀಡಿ ಕರ್ನಾಟಕ ಸರಕಾರ ಗೌರವಿಸಿತು. ವೈಜ್ಞಾನಿಕ ನಿಲುವಿನಿಂದ ಶಿಕ್ಷಣ ಕ್ಷೇತ್ರದಲ್ಲಿ ಸಲ್ಲಿಸಿದ ಸ್ಮರಣೀಯ ಸೇವೆಗಾಗಿ ಭಾರತ ಸರಕಾರ ರಾಷ್ಟ್ರದ ಉನ್ನತ ಪ್ರಶಸ್ತಿಯಾದ 'ಪದ್ಮಭೂಷಣ ಪ್ರಶಸ್ತಿ' ೧೯೮೪ರಲ್ಲಿ ನೀಡಿತು. ವೈಜ್ಞಾನಿಕ, ವೈಚಾರಿಕ ನಿಲುವುಗಳಿಂದ ೧೯೮೮ರಲ್ಲಿ ''ಕಮಿಟಿ ಫಾರ್ ದಿ ಸೈಂಟಿಫಿಕ್ ಇನ್‌ವೆಸ್ಟಿಗೇಷನ್ ಆಫ್ ದಿ ಕ್ಲೈಮ್ಸ್ ಆಫ್ ದಿ ಪ್ಯಾರಾ ನಾರ್ಮಲ್ ಫೆಲೊ'' ಆದರು. ೧೯೮೯-೯೦ರಲ್ಲಿ ಅವರಿಗೆ ಶಿಕ್ಷಣದಲ್ಲಿನ ಅಪರಿಮಿತ ಸೇವೆಗಾಗಿ ಗೌರವ ಡಾಕ್ಟರೇಟ್ ನೀಡಿ ಸನ್ಮಾನಿಸಿತು. ೧೯೯೦ರಲ್ಲಿ ಕರ್ನಾಟಕ ನಾಟಕ ಅಕಾಡೆಮಿಯ ಫೆಲೋ ಆಗಿ ನೇಮಿಸಲಾಯಿತು. ಅಷ್ಟೇಅಲ್ಲದೆ ಅವರು ''Bangalore Science Forum'' ಎಂಬ ವಿಜ್ಞಾನ ವೇದಿಕೆಯ ಸ್ಥಾಪಕ ಅಧ್ಯಕ್ಷರು, ಹಾಗೆಯೇ ''ಬೆಂಗಳೂರು ಲಲಿತಾ ಕಲಾ ಪರಿಷತ್ತಿ''ನ ಸ್ಥಾಪಕ ಅಧ್ಯಕ್ಷರು, ೧೯೯೪ನೇ ವರ್ಷ ಇವರ ಅಪಾರವಾದ ವಿವಿಧ ಕ್ಷೇತ್ರದಲ್ಲಿನ ಸೇವೆಗಾಗಿ ''ಅರಸು ಪ್ರಶಸ್ತಿ''ಯನ್ನು ನೀಡಿ ಸನ್ಮಾನಿಸಲಾಯಿತು.

ಇಂಥ ಎಷ್ಟೇ ಪ್ರಶಸ್ತಿಗಳು ಕೊಟ್ಟರೂ ಅವರ ಕೆಲಸಗಳಿಗೆ ಅದು ಬಹಳ ಕಡಿಮೆ. ಈ ಪ್ರಶಸ್ತಿಗಳಿಂದ ಅವರ ಸಾಧನೆಯನ್ನು ಅಳೆಯಲು ಸಾಧ್ಯವೇ ಇಲ್ಲ.

# ಬರಹಗಳು

ಡಾ. ಎಚ್.ನರಸಿಂಹಯ್ಯನವರಿಗೆ ಕೃತಿಗಳ ರಚನೆಗಿಂತ, ಭಾಷಣಗಳಿಗಿಂತ ಕಾರ್ಯಪ್ರವೃತ್ತಿಯಲ್ಲಿ ಅಚಲವಾದ ನಂಬಿಕೆ. ಆದ್ದರಿಂದಲೇ ನರಸಿಂಹಯ್ಯನವರು ಬರೆದದ್ದು ಬಹಳ ಕಡಿಮೆ. ದುಡಿಮೆಯೇ ಹೆಚ್ಚು. ಬರೆದದ್ದು ಬಹಳ ಕಡಿಮೆ ಬರವಣಿಗೆಯೇ ಆದರೂ ವಿಚಾರಪೂರ್ಣವಾದದ್ದು ಮತ್ತು ಮೌಲಿಕವಾದದ್ದು. ಹಿಡಿಯಾಗಿ ಬರೆದು ಪ್ರಕಟಿಸಿದ ಪುಸ್ತಕವಿಲ್ಲ. ಬದಲಿಗೆ ತಮಗನಿಸಿದ್ದನ್ನು ಬಿಡಿ ಬಿಡಿ ಲೇಖನಗಳಲ್ಲಿ ಬರೆದಿದ್ದಾರೆ. ಇಂಥ ಕೆಲವು ಮೌಲಿಕ ಲೇಖನಗಳನ್ನು ಒಂದೆಡೆ ಸೇರಿಸಿ ಎಚ್ಚೆನ್ ಲೇಖನಗಳೆಂದು ಈ ಹಿಂದೆ ಪ್ರಕಟವಾಯಿತು. ಈ ಪುಸ್ತಕದ ಲೇಖನಗಳೊಂದಿಗೆ ಆನಂತರ ಬರೆದ ಎಲ್ಲ ಲೇಖನಗಳನ್ನು ಒಟ್ಟಿಗೆ ಸೇರಿಸಿ ಚಿ. ಶ್ರೀನಿವಾಸರಾಜು ಅವರ ಸಂಪಾದನೆಯಡಿಯಲ್ಲಿ ಕ್ರೈಸ್ಟ್ ಕಾಲೇಜು ಪ್ರಕಟಿಸಿದ 'ತೆರೆದ ಮನ' ಪುಸ್ತಕವೇ ನರಸಿಂಹಯ್ಯನವರ ಮುಖ್ಯ ಕೃತಿ. ಇದನ್ನು ಬಿಟ್ಟರೆ 'ಕ್ವಿಟ್ ಇಂಡಿಯಾ ಚಳುವಳಿ' ಮತ್ತು 'ಮೈಸೂರು ಚಲೋ ಚಳುವಳಿಗಳಲ್ಲಿ ನನ್ನ ಅನುಭವಗಳು' ಎನ್ನುವ ಕಿರು ಹೊತ್ತಿಗೆ ಇವರ ಮತ್ತೊಂದು ಕೃತಿ.

'ಕ್ವಿಟ್ ಇಂಡಿಯಾ' 'ಮೈಸೂರು ಚಲೋ' ಚಳುವಳಿಯ ಅನುಭವಗಳು ಕೂಡ 'ತೆರೆದ ಮನ'ದಲ್ಲಿ ಸೇರಿರುವುದರಿಂದ ನರಸಿಂಹಯ್ಯನವರ ಪುಸ್ತಕ ಕೇವಲ ಒಂದೇ ಒಂದು ಎಂದು ಹೇಳಬಹುದು. 'ತೆರೆದ ಮನ' ಪುಸ್ತಕದಲ್ಲಿ ಸಂಪಾದಕರೇ ಎಲ್ಲ ಲೇಖನಗಳನ್ನು ವ್ಯವಸ್ಥಿತವಾಗಿ ಜೋಡಿಸಿ (ಕೆಲವು ಇಂಗ್ಲಿಷ್ ಲೇಖನಗಳನ್ನು ಅನುವಾದ ಕೂಡ ಮಾಡಿಸಿ) ನಾಲ್ಕು ವಿಭಾಗಗಳನ್ನಾಗಿ ಮಾಡಿ ಪ್ರಕಟಿಸಿದ್ದಾರೆ. ಈ ವಿಭಾಗಗಳಿಗನುಗುಣವಾಗಿಯೇ ಎಚ್.ಎನ್. ಅವರ ಲೇಖನಗಳನ್ನು ಅರ್ಥ ಮಾಡಿಕೊಳ್ಳುತ್ತ ಹೋಗಬಹುದು.

## 'ಅನುಭವ' ಲೇಖನಗಳು

ಈ ಭಾಗದಲ್ಲಿ ಏಳು ಲೇಖನಗಳಿವೆ. ಈ ಲೇಖನಗಳಲ್ಲಿ ನರಸಿಂಹಯ್ಯನವರು ತಮ್ಮ ವಿಶಿಷ್ಟ ಅನುಭವಗಳನ್ನು ಲೇಖನಗಳ ಮೂಲಕ ಹೇಳಲು ಪ್ರಯತ್ನಿಸಿದ್ದಾರೆ. ತಮ್ಮ ವಿದ್ಯಾರ್ಥಿ ಜೀವನದಲ್ಲೇ (ಬಿ.ಎಸ್‌ಸಿ ಆನರ್ಸ್ ಮೂರನೇ ವರ್ಷದಲ್ಲಿ ಓದುವಾಗ) ಪ್ರಾರಂಭವಾದ ಕ್ವಿಟ್ ಇಂಡಿಯಾ ಚಳುವಳಿಯಲ್ಲಿ ಭಾಗವಹಿಸಿ ತಾತ್ಕಾಲಿಕವಾಗಿ ತಮ್ಮ ವಿದ್ಯಾಭ್ಯಾಸ ನಿಲ್ಲಿಸಿದರು. ಚಳುವಳಿಯಲ್ಲಿ ಭಾಗವಹಿಸಿ ಪ್ರತಿಬಂಧಕಾಜ್ಞೆ ಮುರಿದು ಗೌರಿಬಿದನೂರು, ಬೆಂಗಳೂರು, ಮೈಸೂರು ಜೈಲುಗಳಲ್ಲಿ

ಸೆರೆವಾಸಿಯಾದರು. ನಂತರ ಹೊರಬಂದು ಮತ್ತೆ ಚಳುವಳಿಯಲ್ಲಿ ಭಾಗವಹಿಸಿದರು. ಗಾಂಧಿಯನ್ನು ದಸ್ತಗಿರಿ ಮಾಡಿದಾಗ ಪೂನಾಕ್ಕೆ ಹೋಗಿ ಅಲ್ಲಿಯೂ ಪ್ರತಿಬಂಧಕಾಜ್ಞೆ ಮುರಿದು ದಸ್ತಗಿರಿ ಆದರು. ಕ್ಷಮಾಪಣೆ ಕೇಳದೆ ಕಠಿಣ ಶಿಕ್ಷೆಗೆ ಗುರಿ ಆದರು. ಹೀಗೆ 'ಕ್ವಿಟ್ ಇಂಡಿಯಾ' ಚಳುವಳಿಯಲ್ಲಿ ಭಾಗವಹಿಸಿ ಅನುಭವಿಸಿದ ಕಷ್ಟ ನಷ್ಟಗಳನ್ನೂ ಯರವಾಡ ಜೈಲಿನಲ್ಲಿ ಐದು ತಿಂಗಳ ಕಾಲ ಕಠಿಣ ಶಿಕ್ಷೆ ಅನುಭವಿಸಿದಾಗಿನ ವಿವರಗಳನ್ನೂ ರಾಷ್ಟ್ರೀಯ ಹೋರಾಟದಲ್ಲಿ ಭಾಗವಹಿಸಿದ ಹೋರಾಟಗಾರನಾಗಿ ತಮ್ಮ 'ಕ್ವಿಟ್ ಇಂಡಿಯಾ ಚಳುವಳಿಯಲ್ಲಿನ ನನ್ನ ಅನುಭವಗಳು' ಲೇಖನದಲ್ಲಿ ವಿವರಿಸಿದ್ದಾರೆ.

ತಮ್ಮ ಅನುಭವಗಳನ್ನಷ್ಟೇ ಹೇಳಿದಂತೆ ಕಂಡರೂ ಈ ಲೇಖನದಲ್ಲಿ ಬೇರೇನೋ ಹೇಳಲು ಪ್ರಯತ್ನಿಸಿದಂತಿದೆ. ಬ್ರಿಟಿಷರ ದಬ್ಬಾಳಿಕೆ, ಸ್ವದೇಶ ಅಭಿಮಾನಗಳ ನಡುವಿನ ಘರ್ಷಣೆಯನ್ನು ವಿವರಿಸಲು ಪ್ರಯತ್ನಿಸಿದಂತಿದೆ ಮತ್ತು ಪ್ರತಿಯೊಬ್ಬ ಪ್ರಜೆಗೆ ತನ್ನ ರಾಷ್ಟ್ರ, ದೇಶದ ಬಗ್ಗೆ ಇರಬೇಕಾದ ಅಭಿಮಾನ ಕುರಿತು ಚರ್ಚಿಸಿದಂತಿದೆ. ತನ್ನ ಭಾಷೆ, ದೇಶಗಳ ಬಗ್ಗೆ ಅಭಿಮಾನ ಇರಬೇಕು ಎನ್ನುವುದು ನರಸಿಂಹಯ್ಯನವರ ವಾದವೂ ಕೂಡ ಆಗಿದೆ.

ಜೀವನದ ಬಗೆಗೆ ಎಚ್.ಎನ್. ಅವರು ಆಳವಾಗಿ ಯೋಚಿಸಿದವರು. ಗಾಂಧೀಜಿ ಜೀವನ ಕ್ರಮಕ್ಕೆ ಮೊರೆ ಹೋದವರು. ಆದ್ದರಿಂದಲೇ ಇವರ ಜೀವನ ಕ್ರಮದ ಮೇಲೆ, ಯೋಚನಾ ಶಕ್ತಿಯ ಮೇಲೆ ಗಾಂಧೀಜಿಯ ಅಪಾರವಾದ ಛಾಯೆ ಇದೆ. ೧೩ನೇ ವರ್ಷದವರಿರುವಾಗಲೇ ತಮ್ಮ ಶಾಲೆಯ (ಪ್ರಾಥಮಿಕ ಶಾಲೆ) ಅಧ್ಯಾಪಕರಿಂದ ರಾಷ್ಟ್ರೀಯ ಮನೋಭಾವ ಬೆಳೆಸಿಕೊಂಡು, ಖಾದಿಧಾರಿಗಳಾದ ಎಚ್.ಎನ್. ನ್ಯಾಷನಲ್ ಹೈಸ್ಕೂಲು ಸೇರಿದ ಮೇಲೆ ಗಾಂಧಿ, ನೆಹರು, ಪಟೇಲರಂಥ ರಾಜಕೀಯ ಸಾಮಾಜಿಕ ಧುರೀಣರು ಹೈಸ್ಕೂಲಿಗೆ ಭೇಟಿ ನೀಡಿದ್ದರಿಂದ ರಾಷ್ಟ್ರೀಯ ಮನೋಭಾವ ಅವರಲ್ಲಿ ಗಟ್ಟಿಗೊಂಡಿತು. ಗಾಂಧಿಯ ಸರಳ ಜೀವನ ಬಾಳಿನ ಆದರ್ಶವಾಯಿತು. ಅದು ದಿನೇ ದಿನೇ ಮತ್ತಷ್ಟು ಬೆಳೆದು ಅವರನ್ನು ಸರಳ, ವಿಚಾರವಂತ, ಶಿಕ್ಷಣ ತಜ್ಞನನ್ನಾಗಿ ಮಾಡಿರುವುದನ್ನೂ ತಮ್ಮ ಅನುಭವದ ಲೇಖನಗಳಲ್ಲಿ ಸೂಕ್ಷ್ಮವಾಗಿ ಹೇಳುತ್ತಾರೆ.

ತಮ್ಮ ಸುತ್ತಮುತ್ತಲಿನ ಸಮಾಜದಲ್ಲಿ ನಡೆಯುವ ಘಟನೆಗಳಿಗೆ ಮಾನವೀಯವಾಗಿ ಸ್ಪಂದನಗೊಳ್ಳುವ ಅವರ ಮನಸ್ಸು ಅನೇಕ ಸಾರಿ ದುಃಖ ಪಟ್ಟಿದೆ. ಜೀವನದ ಬಗೆಗೆ ಮತ್ತೆ ಮತ್ತೆ ಯೋಚಿಸುವಂತೆ ಮಾಡಿದೆ. ಉದಾ:- ''ಬದುಕು ನನಗೇನು ಕಲಿಸಿದೆ'' ಲೇಖನದಲ್ಲಿ ಈ ಮಾತುಗಳು ವ್ಯಕ್ತವಾಗುತ್ತವೆ. ''ಸಾಧಾರಣವಾಗಿ ಜನ ನಿರ್ಲಕ್ಷಿಸುವ ಒಂದು ಸಾಮಾನ್ಯ ದೃಶ್ಯ ನನ್ನನ್ನು ದಶಕಗಳಿಂದ ಕಾಡುತ್ತಿದೆ. ಕಸದ ತೊಟ್ಟಿಯ ಹಿಡಿ ಎಂಜಲಿಗಾಗಿ ನಾಯಿಯ ಜೊತೆಗಿನ ಮನುಷ್ಯನ ಜಗಳ ನನ್ನ ಮನಸ್ಸಿನ ಮೇಲೆ ತೀವ್ರವಾದ ಕಳವಳಕಾರಿ ಪರಿಣಾಮವನ್ನು ಬೀರುತ್ತಲೇ ಇದೆ. ಕಡು ಬಡತನದ ಇಂಥ ದೃಶ್ಯಗಳು ನನ್ನಲ್ಲಿ ಯಾವಾಗಲೂ ಅಪರಾಧಿತ್ವದ ಭಾವನೆಯನ್ನು ಬೆಳೆಸುತ್ತವೆ.'' ತಮ್ಮ ಸುತ್ತಲ ಜಗತ್ತಿನಲ್ಲಿ ಕಂಡ ಇಂಥ ಘಟನೆಗಳಿಗೆ ಸ್ಪಂದಿಸಿರುವುದು ಈ ಲೇಖನದಲ್ಲಿ ವ್ಯಕ್ತವಾಗುತ್ತದೆ.

'ಕ್ವಿಟ್ ಇಂಡಿಯಾ' ಚಳುವಳಿ, ಮೈಸೂರು ಚಲೋ ಚಳುವಳಿ ಮತ್ತು ಸಮಾಜದ ಅನೇಕ ಘಟನೆಗಳಿಗೆ ಸ್ಪಂದಿಸಿದ ಅನುಭವಗಳು ಒಂದು ರೀತಿಯವುಗಳಾದರೆ, ನ್ಯಾಷನಲ್ ಹೈಸ್ಕೂಲು, ಕಾಲೇಜಿನ ಅನುಭವಗಳು ಮತ್ತೊಂದು ಬಗೆಯವು. ಏಕೆಂದರೆ ಎಚ್.ಎನ್. ತಮ್ಮ ಜೀವನದ ಹೆಚ್ಚು ಕಾಲ ನ್ಯಾಷನಲ್ ಹೈಸ್ಕೂಲು, ಕಾಲೇಜು, ನ್ಯಾಷನಲ್ ಎಜ್ಯುಕೇಷನ್ ಸೊಸೈಟಿಗೆ ಸೇವೆ ಸಲ್ಲಿಸುವಲ್ಲಿ ಕಳೆದವರು. ಸುಮಾರು ಅರವತ್ತು ವರ್ಷಗಳ ಕಾಲ ಹಾಸ್ಟೆಲ್ ಜೀವನ ನಡೆಸಿದವರು. ಹಾಗಾಗಿ ಎಚ್.ಎನ್. ಅವರ ಜೀವನದ ವಿವರಗಳು, ಅನುಭವಗಳು ಬರೆಯುತ್ತೇವೆ ಎಂದರೂ ಅದು ನ್ಯಾಷನಲ್ ಹೈಸ್ಕೂಲು, ಕಾಲೇಜುಗಳ ಚರಿತ್ರೆ ಬರೆದಂತೆಯೂ ಆಗುತ್ತದೆ. ಏಕೆಂದರೆ ತಮ್ಮ ಮಾಧ್ಯಮಿಕ ಶಾಲಾಭ್ಯಾಸಕ್ಕಾಗಿ ೧೯೩೫ ರಲ್ಲಿ ನ್ಯಾಷನಲ್ ಹೈಸ್ಕೂಲು ಸೇರಿದಾಗಿನಿಂದ ಈಗಲು ೫೯ ವರ್ಷಗಳ ದೀರ್ಘಕಾಲ ಅದರೊಂದಿಗೆ ತಮ್ಮ ಒಡನಾಟ ಇಟ್ಟುಕೊಂಡಿದ್ದಾರೆ. ಶಾಲೆ, ಹಾಸ್ಟೆಲ್ ವಿದ್ಯಾರ್ಥಿಯಾಗಿ, ಅದೇ ಕಾಲೇಜಿನ ಅಧ್ಯಾಪಕನಾಗಿ, ತಾನಿದ್ದ ವಿದ್ಯಾರ್ಥಿ ನಿಲಯದ ವಾರ್ಡನ್ ಆಗಿ, ಪ್ರಾಂಶುಪಾಲರಾಗಿ, ನ್ಯಾಷನಲ್ ಎಜ್ಯುಕೇಷನ್ ಸೊಸೈಟಿಯ ಅಧ್ಯಕ್ಷರಾಗಿ ಸವೆಸಿದ ಜೀವನದ ಒಳನೋಟಗಳನ್ನು ನೀಡಿದಂತೆಯೇ ಅಂಥ ವಿವರಗಳನ್ನು ನೀಡುವ ಅನುಭವಗಳು ಇದರಲ್ಲಿವೆ.

ಸುದೀರ್ಘವಾದ ಕಾಲೇಜಿನೊಂದಿಗಿನ ನಿಕಟ ಸಂಪರ್ಕ ಹೊಂದಿದ ಎಚ್.ಎನ್. ಕಾಲೇಜಿನೊಂದಿಗಿರುವ ತಮ್ಮ ಸಂಬಂಧವನ್ನು ಬಹಳ ಸೂಕ್ಷ್ಮವಾಗಿ ಅವಲೋಕಿಸಿದ್ದಾರೆ. ಕಾಲೇಜಿನಲ್ಲಿ ವಿದ್ಯಾರ್ಥಿ ಉಪಾಧ್ಯಾಯರ ನಡುವಿನ ಸಂಬಂಧ ಹೇಗಿರಬೇಕೆಂದು ಸ್ವತಃ ಅನುಭವದಿಂದ ಹೇಳಿದ್ದಾರೆ. ವಿದ್ಯಾರ್ಥಿಗಳಲ್ಲಿ ಅಶಾಂತಿ ತಲೆದೋರಲು ಮುಖ್ಯ ಕಾರಣವೇನು? ಎನ್ನುವುದನ್ನು ಕುರಿತು ಚಿಂತಿಸಿದ್ದಾರೆ. ವಿದ್ಯಾರ್ಥಿಗಳನ್ನು ಸನ್ಮಾರ್ಗದಲ್ಲಿ ಕರೆದೊಯ್ಯಲು ಉಪಾಧ್ಯಾಯರ, ಪೋಷಕರ ಪಾತ್ರ ಎಂಥದ್ದು ಎನ್ನುವುದನ್ನು ಹೇಳುತ್ತಾರೆ. ಅಷ್ಟೇ ಅಲ್ಲದೆ ಸಮಾಜದ ಆಗು ಹೋಗುಗಳಲ್ಲಿ ಪತ್ರಿಕೆಗಳ ಹೊಣೆಗಾರಿಕೆ ಎಂಥದ್ದು ಎನ್ನುವುದನ್ನು ಯೋಚಿಸುತ್ತಾರೆ. ತಮ್ಮ ಇಂಥ ಅನೇಕ ಅನುಭವಗಳ ಮೂಲಕ ಉತ್ತರಗಳನ್ನು ಕಂಡುಕೊಳ್ಳಲು ಪ್ರಯತ್ನಿಸಿರುವುದು ಈ ಲೇಖನಗಳಲ್ಲಿ ಕಂಡು ಬರುತ್ತದೆ. ಈ ಹಿನ್ನೆಲೆಯಲ್ಲಿ ಅಧ್ಯಾಪಕರು, ಕಾಲೇಜು, ಪೋಷಕರು, ಸರಕಾರ ಎಲ್ಲಿ ದಾರಿ ತಪ್ಪುತ್ತಿವೆ? ಮತ್ತು ಅವುಗಳು ಮಾಡಬೇಕಾದ ಮುಖ್ಯ ಕೆಲಸವೇನು ? ಎನ್ನುವುದನ್ನು ಮನಗಂಡಿದ್ದಾರೆ. ಆ ಮಾರ್ಗದಲ್ಲೆ ತಮ್ಮ ಇಡೀ ಅಧ್ಯಾಪಕ ಜೀವನ ತೆತ್ತಿದ್ದಾರೆ. ಈಗಲೂ ಹಾಗೆ ಬದುಕುತ್ತಿದ್ದಾರೆ. ಇದು ಸಹಜವಾಗಿಯೇ ಇಲ್ಲಿನ ಲೇಖನಗಳಲ್ಲಿ ವ್ಯಕ್ತವಾಗುತ್ತದೆ.

ನರಸಿಂಹಯ್ಯನವರ ಅನುಭವ ಕೇವಲ ನ್ಯಾಷನಲ್ ಕಾಲೇಜು ಶಿಕ್ಷಣಕ್ಕೆ ಮಾತ್ರ ಸೀಮಿತಗೊಂಡಿಲ್ಲ. ನಮ್ಮ ಸಮಾಜದಲ್ಲಿ ಬಹುಮುಖ್ಯವಾಗಿ ಪಾತ್ರವಹಿಸುವ ಪತ್ರಿಕೆಗಳಿಗೆ, ವಿದ್ಯಾರ್ಥಿಗಳ ಪೋಷಕರಿಗೆ, ವಿದ್ಯಾರ್ಥಿ ಚಳುವಳಿಗಳಿಗೂ ಹರಿದಿದೆ. ಅವುಗಳ ಮೂಲಕ ಸಮಷ್ಟಿಯನ್ನು ಕುರಿತ ಚಿಂತನೆಗಳು ಈ ಲೇಖನದಲ್ಲಿವೆ.

## ವೈಚಾರಿಕ ಲೇಖನಗಳು

ವಿಜ್ಞಾನದ ವಿದ್ಯಾರ್ಥಿಯಾಗಿ, ಅಧ್ಯಾಪಕರಾಗಿ ವೈಜ್ಞಾನಿಕ ಮನೋಭಾವ ಬೆಳೆಸಿಕೊಂಡ ಎಚ್ಚೆನ್ ಪವಾಡಗಳನ್ನು, ದೇವರನ್ನು, ಗೊಡ್ಡು ನಂಬಿಕೆಗಳನ್ನು ನಂಬುವುದಿಲ್ಲ. ಅವುಗಳನ್ನು ಒರೆಗಲ್ಲಿಗೆ ಹಚ್ಚಿ ನೋಡಬೇಕು ಎನ್ನುತ್ತಾರೆ. ವಿಜ್ಞಾನ, ತಂತ್ರಜ್ಞಾನ ಬೆಳೆದರೂ ನಮ್ಮ ಜನರ ಮನಸ್ಸಿನಲ್ಲಿರುವ ಮೂಢ ನಂಬಿಕೆಗಳು ಕಡಿಮೆ ಆಗಿಲ್ಲ ಎನ್ನುವುದೇ ಇವರ ಆತಂಕ.

ಬೆಂಗಳೂರು ವಿಶ್ವವಿದ್ಯಾಲಯದ ಉಪಕುಲಪತಿಗಳಾಗಿದ್ದಾಗ ಡಾ. ಎಚ್. ನರಸಿಂಹಯ್ಯನವರು ೧೯೭೬-೭೭ ರಲ್ಲಿ ವಿಜ್ಞಾನ, ದೇವರು, ಪವಾಡಗಳ ಬಗೆಗೆ ಒಂದು ತನಿಖೆಯನ್ನು ನಡೆಸಿದರು. ಇದರಲ್ಲಿ ಎಚ್.ಎನ್ ಮತ್ತು ಸತ್ಯಸಾಯಿಬಾಬಾರ ನಡುವೆ ದೊಡ್ಡ ವಾದ ವಿವಾದವೇ ನಡೆಯಿತು. ಇದರಲ್ಲಿ ಅನೇಕರು ಬಾಬಾ ಕಡೆಗಿದ್ದು ಎಚ್.ಎನ್. ಅವರನ್ನು ಹೀನಾಮಾನವಾಗಿ ಬೈದವರಿದ್ದಾರೆ. ಹಾಗೆಯೇ ಕೆಲವರು ಪ್ರೋತ್ಸಾಹಿಸಿ ಖುಷಿಗೊಂಡವರೂ ಇದ್ದಾರೆ.

ಸಮಾಜದಲ್ಲಿರುವ ಮೂಢನಂಬಿಕೆ, ದೇವರುಗಳ ಕಲ್ಪನೆಯಿಂದ ಜನರಿಗೆ ಮತ್ತು ಸಮಾಜಕ್ಕೆ ಹಾನಿಯುಂಟಾಗುತ್ತಿರುವುದನ್ನು ಹೋಗಲಾಡಿಸಲು ಒಂದು ಯೋಜನೆಯನ್ನು ರೂಪಿಸಿದರು. ಶೂನ್ಯದಲ್ಲಿ ವಸ್ತುಗಳನ್ನು ಸೃಷ್ಟಿಸುವುದನ್ನು ವೈಜ್ಞಾನಿಕವಾಗಿ ಬಯಲು ಮಾಡಲು ವಿವಿಧ ಕ್ಷೇತ್ರಗಳಿಗೆ ಸಂಬಂಧಿಸಿದ ಹನ್ನೊಂದು ಜನರ ಸಮಿತಿಯನ್ನು ರಚಿಸಿದರು. ಶಿವಬಾಲಯೋಗಿ ಸ್ವಾಮಿಗಳು, ಕೊಡಗಿನ ಶ್ರೀಸ್ವಾಮಿ ಶಂಕರ, ಮೈಸೂರಿನ ಸಚ್ಚಿದಾನಂದ ಗಣಪತಿ ಸ್ವಾಮಿಗಳನ್ನು ಸಂದರ್ಶಿಸಿದಾಗ ತಾವು ಶೂನ್ಯದಿಂದ ಯಾವುದೇ ವಸ್ತುವನ್ನು ಸೃಷ್ಟಿಸುವುದಿಲ್ಲ ಎಂದು ತಿಳಿಸಿದರು. ಆದರೆ ಪುಟ್ಟಪರ್ತಿಯ ಶ್ರೀ ಸತ್ಯಸಾಯಿ ಬಾಬ ಇದಕ್ಕೆ ಯಾವುದೇ ಪ್ರತಿಕ್ರಿಯೆ ನೀಡಲಿಲ್ಲ. ಆಗ ಪುಟ್ಟಪರ್ತಿ ಸಾಯಿಬಾಬ ಹೀಗೆ ಶೂನ್ಯದಲ್ಲಿ ವಸ್ತುಗಳನ್ನು ಸೃಷ್ಟಿಸುವಲ್ಲಿ ಪ್ರಚಲಿತದಲ್ಲಿದ್ದರು. ಆದ್ದರಿಂದ ನರಸಿಂಹಯ್ಯನವರೇ ನೇರವಾಗಿ ಪತ್ರ ಬರೆದರು. ಅದಕ್ಕೂ ಉತ್ತರ ನೀಡದೆ ಬಹಿರಂಗ ಸಭೆಯಲ್ಲಿ ಇದನ್ನು ವಿರೋಧಿಸಿದರು. ತಮ್ಮನ್ನು ಪರೀಕ್ಷಿಸುವ ಶಕ್ತಿ ಜಗತ್ತಿನಲ್ಲಿ ಯಾವುದಕ್ಕೂ ಇಲ್ಲ ಎಂದು ಹೇಳಿದರು. ಇದಾವುದಕ್ಕೂ ಎದೆಗುಂದದೆ ಎಚ್.ಎನ್. ಮತ್ತೆ ಪತ್ರ ಬರೆದರು. ಅದಕ್ಕೂ ಪ್ರತಿಕ್ರಿಯೆ ಬರಲಿಲ್ಲ.

ಶೂನ್ಯದಲ್ಲಿ ವಸ್ತುಗಳನ್ನು ಸೃಷ್ಟಿಸುವ ಪವಾಡಗಳ ಬಗೆಗೆ ನರಸಿಂಹಯ್ಯನವರು ಮುಖ್ಯವಾಗಿ ಎತ್ತಿದ ಪ್ರಶ್ನೆಗಳು ಬಹಳ ಗಂಭೀರವಾದವುಗಳು. ೧. ಶೂನ್ಯದಲ್ಲಿ ಸೃಷ್ಟಿಸುವ ಯಾವುದೇ ವಸ್ತು, ಸೃಷ್ಟಿಸುವ ವ್ಯಕ್ತಿಯ ಮುಷ್ಟಿ ಗಾತ್ರಕ್ಕಿಂತ ಕಡಿಮೆ ಇರಲು ಕಾರಣವೇನು? ೨. ಅವರು ಸೃಷ್ಟಿಸುವ ಕೈಗಡಿಯಾರ, ಉಂಗುರದಂಥ ವಸ್ತುಗಳು ಮೊದಲು ಪ್ರಪಂಚದಲ್ಲಿ ಇರುವಂತಹುದೇ ಯಾಕೆ ಆಗಿರುತ್ತವೆ? ೩. ಸೃಷ್ಟಿಸುವಾತ ದೊಡ್ಡ ಗಾತ್ರದ ಕುಂಬಳಕಾಯಿಯನ್ನಾಗಲಿ, ಮೂರು ಅಡಿ ಎತ್ತರದ ಲೋಹದ ಮೂರ್ತಿಯನ್ನಾಗಲೀ ಯಾಕೆ ಸೃಷ್ಟಿಸುವುದಿಲ್ಲ? ೪. ಪ್ರಪಂಚದಲ್ಲಿ ಇಲ್ಲದೇ ಇರುವ

ವಸ್ತುವನ್ನು ಸೃಷ್ಟಿಸುವುದಿಲ್ಲ ಏಕೆ? ೫. ಸೃಷ್ಟಿಸುವ ವ್ಯಕ್ತಿ ದೇವರಿಗೆ ಸಮಾನವಾದರೆ ಇವರಿಗೆ ಎಲ್ಲ ಭಾಷೆಗಳು ಏಕೆ ಬರುವುದಿಲ್ಲ? ಈ ಗಂಭೀರ ಪ್ರಶ್ನೆಗಳೊಂದಿಗೆ ಸಾಯಿಬಾಬರನ್ನು ದೈಹಿಕ ರಚನೆ ಕುರಿತು ಆಡುವ ಮಾತುಗಳು ಕೂಡ ಸಂಪೂರ್ಣ ವೈಜ್ಞಾನಿಕ ಮತ್ತು ತರ್ಕಬದ್ಧ ಮಾತುಗಳೇ ಆಗುತ್ತವೆ. ''ಶ್ರೀ ಸತ್ಯಸಾಯಿಬಾಬ ಅವರನ್ನೂ ಸೂಕ್ಷ್ಮವಾಗಿ ಗಮನಿಸಿದರೆ, ಅವರ ಕಾರ್ಯಕ್ರಮಗಳನ್ನು ವಿಶ್ಲೇಷಿಸಿದರೆ ಎಲ್ಲ ಮನುಷ್ಯರಂತೆ ದೇಹರಚನೆ, ದೈನಿಕ ಅಭ್ಯಾಸಗಳು ಕಂಡು ಬರುತ್ತವೆ. ಅವರಿಗೂ ಕೆಲವು ವಿಷಯಗಳಲ್ಲಿ ಆಸಕ್ತಿ - ಅನಾಸಕ್ತಿಗಳು, ಸಾಮರ್ಥ್ಯ - ಅಸಾಮರ್ಥ್ಯ, ವ್ಯವಹಾರಗಳಲ್ಲಿ ಕಂಡು ಬರುವ ಸೋಲು - ಗೆಲುವುಗಳು, ಕೋಪಕ್ಕೆ ಒಳಗಾಗಿ ಆಗಾಗ್ಗೆ ನಿಂದನೆಯ ಮಾತುಗಳನ್ನು ಉಪಯೋಗಿಸುವುದು, ಸನ್ನಿವೇಶಗಳಿಗೆ ಪ್ರತಿಕ್ರಿಯಿಸುವುದು, ನಿರಾಶೆ ಆತಂಕಗಳಿಗೆ ಒಳಗಾಗುವುದು, ಜ್ಞಾನದ ಪರಿಮಿತಿ ಈ ಎಲ್ಲ ಅಂಶಗಳು ಅವರು ಎಲ್ಲರಂತೆ ಮನುಷ್ಯರು ಎಂಬುದನ್ನು ತಿಳಿಸುತ್ತದೆ.'' ''ಪವಾಡಗಳನ್ನು ಕುರಿತು ಬೆಂಗಳೂರು ವಿಶ್ವವಿದ್ಯಾಲಯದ ತನಿಖೆಗಳು'' ಲೇಖನದಲ್ಲಿ ನರಸಿಂಹಯ್ಯನವರು ಹೇಳುವ ಮಾತುಗಳು ಚರ್ಚೆಗಳು ಇನ್ನೂ ಆಗಬೇಕಾದವುಗಳು. ಏಕೆಂದರೆ ಹದಿನೆಂಟು ವರ್ಷಗಳ ಹಿಂದೆಯೇ ಸತ್ಯಸಾಯಿ ಬಾಬನಿಗೆ ಸವಾಲಾಗಿದ್ದ ನರಸಿಂಹಯ್ಯನವರ ಪ್ರಶ್ನೆಗಳನ್ನು, ವ್ಯಾಖ್ಯಾನಗಳನ್ನು ಯಾರಾದರೂ ಒಪ್ಪಿಕೊಳ್ಳಲೇಬೇಕಾದಂಥವುಗಳು.

ದಿನನಿತ್ಯ ವಿಜ್ಞಾನ ವಿಜ್ಞಾನ ಎಂದು ಬಡಿದುಕೊಳ್ಳುವ ನಾವು ನಮ್ಮ ಮಕ್ಕಳೆಲ್ಲ ಇಂಜಿನಿಯರ್, ಡಾಕ್ಟರ್ ಆಗಬೇಕೆಂದು ಅಪೇಕ್ಷೆ ಪಡುತ್ತೇವೆ. ದಿನಗಟ್ಟಲೆ ತರಗತಿಗಳಲ್ಲಿ, ಭಾಷಣಗಳಲ್ಲಿ ವಿಜ್ಞಾನದ ಪ್ರಗತಿ ಕುರಿತು ಮಾತಾಡುತ್ತೇವೆ. ಅನೇಕರು ತರಗತಿಯಿಂದ ಹೊರಗೆ, ಭಾಷಣಗಳಿಂದ ಹೊರಬಂದು ವೈಯಕ್ತಿಕ ಬದುಕಿನಲ್ಲಿ ಸಾಂಪ್ರದಾಯವಾದಿಯಾಗಿ, ನಂಬಿಕೆ, ದೈವವನ್ನು ನಂಬಿ ಜೀವನ ನಡೆಸುತ್ತಾರೆ. ಇದನ್ನೂ ನರಸಿಂಹಯ್ಯನವರು ತಮ್ಮ ಅನೇಕ ಲೇಖನಗಳಲ್ಲಿ ವಿರೋಧಿಸುತ್ತಾರೆ.

ವೈಚಾರಿಕ ಲೇಖನಗಳ ಮೂಲಕ ಡಾ. ಎಚ್.ಎನ್. ಅವರು ಹೇಳಲು ಬಯಸುವ ಮುಖ್ಯ ಆಶಯವೆಂದರೆ ಜನರಲ್ಲಿ ವೈಜ್ಞಾನಿಕ ಮನೋಭಾವ ಬೆಳೆಯಬೇಕು ಎನ್ನುವುದು. ನಮ್ಮಲ್ಲಿ ವಿಜ್ಞಾನ ಬೆಳೆದಿದೆ ಆದರೆ ವೈಜ್ಞಾನಿಕ ಮನೋಭಾವ ಬೆಳೆದಿಲ್ಲ ಎನ್ನುವುದು ಇವರ ಮುಖ್ಯ ವಾದ. ಆ ಮನೋಭಾವ ಬೆಳೆಯುವವರೆಗೆ ಇಂಥ ನಂಬಿಕೆಗಳಿಂದ ತಪ್ಪಿಸಿಕೊಳ್ಳಲು ಆಗುವುದೇ ಇಲ್ಲ ಎನ್ನುವುದು ಇವರ ಖಚಿತ ತೀರ್ಮಾನ. ಡಾ. ಎಚ್. ನರಸಿಂಹಯ್ಯನವರ ಜಂಕ್ಕೂ ಹೆಚ್ಚು ಲೇಖನಗಳು ಈ ಹಿನ್ನೆಲೆಯಲ್ಲಿ ಬರೆಯಲ್ಪಟ್ಟಿವೆ. ಧರ್ಮ, ದೇವರು, ಪ್ರಾರ್ಥನೆ, ಪೂಜೆ, ಜ್ಯೋತಿಷ್ಯ, ಪುನರ್ಜನ್ಮ, ಕರ್ಮ ಜಾತಿ ವ್ಯವಸ್ಥೆಯ ಬಗೆಗಿನ ನಂಬಿಕೆ, ಆಚರಣೆಗಳನ್ನು ಕುರಿತು ಮಾಡುವ ವಿಶ್ಲೇಷಣೆ ಈ ಎಲ್ಲ ಲೇಖನಗಳಲ್ಲೂ ಅಡಗಿದೆ.

ದಿನ ಬೆಳಗಾದರೆ ಕೋಮು ಗಲಭೆ, ಎರಡು ಧರ್ಮಗಳ ನಡುವಿನ ವ್ಯಾಜ್ಯ ಸಾವಿರಾರು ಅಮಾಯಕ ಜನರನ್ನೂ ಬಲಿ ತೆಗೆದುಕೊಳ್ಳುತ್ತಿರುವುದು ಪತ್ರಿಕೆಗಳ ಮೂಲಕ ಓದುತ್ತಿದ್ದೇವೆ. ನಮ್ಮ ಸುತ್ತ ಮುತ್ತಲೂ ನೋಡುತ್ತಿದ್ದೇವೆ. ಇದಕ್ಕೆ ಏನು ಕಾರಣ?

ಎನ್ನುವ ಪ್ರಶ್ನೆ ಎಚ್.ಎನ್. ಅವರನ್ನು ಬಹಳ ಹಿಂದಿನಿಂದಲೇ ಕಾಡಿದೆ. ಜನರ ಮನದಲ್ಲಿ ಆಳವಾಗಿ ಬೇರು ಬಿಟ್ಟಿರುವ ನಂಬಿಕೆಗಳು, ಧಾರ್ಮಿಕ ಆಚರಣೆಗಳು, ತಮ್ಮ ಧರ್ಮ, ತಮ್ಮ ದೇವರು ಎನ್ನುವ ಕಲ್ಪನೆಯ ಮೂಲಕ ನಮ್ಮ ರಾಜಕಾರಣಿಗಳು ಸ್ವಾರ್ಥಿಗಳು ತಮ್ಮ ಬೇಳೆ ಬೇಯಿಸಿಕೊಳ್ಳಲು ಮಾಡುತ್ತಿರುವ ಕುತಂತ್ರವನ್ನು ಯಾರೂ ಅರಿಯುತ್ತಿಲ್ಲ.

ಒಂದು ಕಡೆ ವಿಜ್ಞಾನದ ಬೆಳವಣಿಗೆ ಆಗುತ್ತಿದ್ದರೂ ಮತ್ತೊಂದು ಕಡೆ ರಾಜಕಾರಣಿಗಳು, ಸ್ವಾರ್ಥಿಗಳು ತಮ್ಮ ಕೆಲಸಗಳಿಗಾಗಿ ಜನರಲ್ಲಿ ದೇವರು, ಧರ್ಮ, ಜಾತಿಗಳ ಬಗೆಗೆ ಭಯ ಆತಂಕ ಹುಟ್ಟಿಸುತ್ತಿದ್ದಾರೆ. ತಲತಲಾಂತರದಿಂದ ಜನರ ಮನದಾಳದಲ್ಲಿ ತುಂಬಿ ನಿಂತ ನಂಬಿಕೆಗಳಿಗೆ ಪುಷ್ಟಿ ಕೊಡುತ್ತಿದ್ದಾರೆ. ಆದ್ದರಿಂದಲೇ ನಮ್ಮ ಜನಗಳು, ವಿದ್ಯಾವಂತರು (ವಿಜ್ಞಾನದ ಉಪನ್ಯಾಸಕರು, ವಿಜ್ಞಾನಿಗಳು, ಮುಂತಾದವರು) ಕೂಡ ಸೃಷ್ಟಿ, ಸೃಷ್ಟಿಕರ್ತ ಅಥವಾ ಮನುಷ್ಯನಿಗಿಂತ ಒಂದು ದೊಡ್ಡ ಶಕ್ತಿ ಇದೆ ಎಂದು ನಂಬುವಂತೆ ಮಾಡಲಾಗಿದೆ.

ಮನುಷ್ಯ ಇಂದು ಚಂದ್ರಲೋಕಕ್ಕೆ ಹೋಗಿದ್ದಾನೆ. ಗುರು ಗ್ರಹಕ್ಕೂ ಪಾದಾರ್ಪಣೆ ಮಾಡುವ ಸನ್ನಾಹದಲ್ಲಿದ್ದಾನೆ. ಅಣುಬಾಂಬ್ ಕಂಡು ಹಿಡಿದಿದ್ದಾನೆ. ಒಬ್ಬ ವ್ಯಕ್ತಿ ಜಗತ್ತಿನ ಯಾವ ಮೂಲೆಗಾದರೂ ಕೆಲವೇ ಗಂಟೆಗಳಲ್ಲಿ ಹೋಗಬಲ್ಲ. ಸಮುದ್ರದ ತಳದಲ್ಲಿ ಈಜಬಲ್ಲ. ಆಕಾಶದಲ್ಲಿ ಹಾರಾಡಬಲ್ಲ. ವಿಜ್ಞಾನ ವಿವರಿಸಲು ಸಾಧ್ಯವಾಗದಷ್ಟು ಪ್ರಮಾಣದಲ್ಲಿ ಬೆಳೆದಿದೆ. ಮತ್ತು ವಿಜ್ಞಾನ, ತಂತ್ರಜ್ಞಾನದ ಸಹಾಯವಿಲ್ಲದೆ ಒಂದು ಕ್ಷಣವೂ ಅಸಾಧ್ಯ ಎನ್ನುವಷ್ಟರ ಮಟ್ಟಿಗೆ ಅದರ ಮೇಲೆ ಅವಲಂಬಿತರಾಗಿದ್ದೇವೆ. ಆದರೂ ನಮ್ಮನ್ನು (ಭಾರತೀಯರನ್ನು) ದೇವರು, ದೈವ, ಧರ್ಮ, ಜಾತಿ, ಕರ್ಮ ಸಿದ್ಧಾಂತಗಳಿಂದ ಬಿಡಿಸಲಾಗುತ್ತಿಲ್ಲ. ಇದಕ್ಕೆ ಮೂಲಭೂತ ಕಾರಣಗಳೇನು? ಎನ್ನುವುದರ ಬಗೆಗೂ ಎಚ್.ಎನ್. ಅವರ ಲೇಖನಗಳಲ್ಲಿ ಸಾಕಷ್ಟು ಚರ್ಚೆ ಇದೆ. ಅದಕ್ಕೆ ಸೂಕ್ತವಾದ ಕಾರಣಗಳು ಮತ್ತು ಪರಿಹಾರಗಳನ್ನು ಸೂಚಿಸಿದ್ದಾರೆ.

ಈ ಹಿಂದೆ ಹೇಳಿದಂತೆ ಶಿಕ್ಷಣದಲ್ಲಿ ವಿಜ್ಞಾನದ ಜೊತೆಗೆ ವೈಜ್ಞಾನಿಕ ಮನೋಭಾವ ಎಲ್ಲಿಯ ತನಕ ಜನರಲ್ಲಿ ಬೆಳೆಸುವುದಿಲ್ಲವೋ ಅಲ್ಲಿಯವರೆಗೆ ಈ ದ್ವಂದ್ವ ತಪ್ಪಿದ್ದಲ್ಲ. ಇದಕ್ಕೆ ಮುಖ್ಯವಾಗಿ ಶಿಕ್ಷಕರು ಕಾರಣರು. ನಮ್ಮ ಶಿಕ್ಷಕರ ಬೋಧನೆಗೂ ಅವರ ಜೀವನಕ್ಕೂ ಇರುವ ಅಂತರ ಹೋಗಬೇಕು. ಆಗ ಖಂಡಿತವಾಗಿಯೂ ಇಂಥ ಮೂಢ ನಂಬಿಕೆಗಳಿಂದ ದೇಶವನ್ನು ಮುಕ್ತಗೊಳಿಸಲು ಸಾಧ್ಯ. ಆದರೆ ಇದು ತಕ್ಷಣಕ್ಕೆ ಆಗುವ ಕೆಲಸವಲ್ಲ. ಬಹಳ ನಿಧಾನವಾಗಿ ಮಂದಗತಿಯಲ್ಲಿ ಆಗಬೇಕಾದ ಕೆಲಸ. ಮತ್ತು ಆ ಮಾರ್ಗದಲ್ಲಿ ಸಾಗುತ್ತಿರುವುದು ಕಂಡು ಸಂತಸ. ಆದರೂ ಇನ್ನು ದಿಟ್ಟ ಹೆಜ್ಜೆ ಇಡಬೇಕಾಗಿದೆ ಎನ್ನುವುದು ಡಾ. ಎಚ್. ನರಸಿಂಹಯ್ಯನವರ ಆಸೆ.

ಸಮಾಜದ ಕೆಲವು ಸ್ವಾರ್ಥ ಜನಗಳು (ರಾಜಕಾರಣಿಗಳು, ಸ್ವಾಮಿಗಳು, ಜ್ಯೋತಿಷಿಗಳು ಮುಂತಾದವರು) ಸಾಮಾನ್ಯ ಜನರನ್ನು ಅಸಹಾಯಕರನ್ನಾಗಿ ಮಾಡಿ ಅವರ ವೈಜ್ಞಾನಿಕ ಮನೋಭಾವವನ್ನು ಮೊಟಕುಗೊಳಿಸುತ್ತಿದ್ದಾರೆ. ಅದನ್ನು

ಚಿವುಟಿಹಾಕುತ್ತಿದ್ದಾರೆ. ಅವರು ಮತ್ತೆ ಮತ್ತೆ ದೇವರನ್ನೂ, ಜ್ಯೋತಿಷ್ಯವನ್ನೂ, ಸ್ವಾಮೀಜಿಗಳನ್ನೂ ಮೊರೆ ಹೋಗುವಂತೆ ಮಾಡುತ್ತಿದ್ದಾರೆ. ಮೊದಲು ಇದು ತಪ್ಪಬೇಕು. ದೇಶದಲ್ಲಿ ಆರ್ಥಿಕವಾಗಿ, ಶೈಕ್ಷಣಿಕವಾಗಿ ಎಲ್ಲ ಜನರು ಪ್ರಬಲರಾಗುವವರೆಗೆ ನಮ್ಮ ಜನಗಳನ್ನು ಇಂಥ ಸ್ವಾರ್ಥಿಗಳು (ಕೆಲಸ ಸಿಗದಂತೆ, ಸ್ಥಾನಮಾನ ದೊರಕದಂತೆ, ಇಂಥ ದೇವರಿಗೆ ಹೋದರೆ ನಿಮ್ಮ ಸಮಸ್ಯೆ ಪರಿಹಾರ ಆಗುತ್ತದೆ ಎನ್ನುವ ನಂಬಿಕೆ ತುಂಬುವುದು) ಅಸಹಾಯಕರನ್ನಾಗಿ ಮಾಡಿ ತಮ್ಮ ಕೆಲಸ ಸುಲಭವಾಗಿ ಸಾಧಿಸಿಕೊಳ್ಳುತ್ತಲೇ ಇರುತ್ತಾರೆ - ಎನ್ನುವುದರ ಚರ್ಚೆ ಇವರ ಅನೇಕ ಲೇಖನಗಳ ಮುಖ್ಯ ವಸ್ತುವಾಗಿದೆ ಎಂದರೂ ತಪ್ಪಾಗಲಾರದು. ಉದಾಹರಣೆಗೆ ಭಾರತೀಯರಲ್ಲಿ ಕರ್ಮಸಿದ್ಧಾಂತದ ಪ್ರಕಾರ ಮನುಷ್ಯನನ್ನು ಅಸಹಾಯಕನನ್ನಾಗಿ ಮಾಡುವುದರ ಕುರಿತು 'ಪುನರ್ಜನ್ಮ ಮತ್ತು ಕರ್ಮ ಸಿದ್ಧಾಂತ' ಲೇಖನದಲ್ಲಿನ ಮಾತುಗಳನ್ನು ಗಮನಿಸಬಹುದು. ''ಜೀವನದಲ್ಲಿ ಬೆಂದವನು, ಶೋಷಿಸಲ್ಪಟವನು, ಕೆಳವರ್ಗದವನು ತನ್ನ ಸ್ಥಿತಿಗೆ ತಾನು ಹಿಂದಿನ ಜನ್ಮದಲ್ಲಿ ಮಾಡಿದ ಪಾಪ ಪುಣ್ಯಗಳೇ ಕಾರಣ ಎಂದು ಸಮಾಧಾನ ಪಟ್ಟುಕೊಳ್ಳುತ್ತಾ, ಎಲ್ಲಾ ಸಾಮಾಜಿಕ ಅನ್ಯಾಯಗಳಿಗೂ, ಆರ್ಥಿಕ ಅಸಮಾನತೆಗೂ, ಶೋಷಣೆ, ಪಟ್ಟಭದ್ರ ಹಿತಗಳಿಗೂ ಸಂರಕ್ಷಣೆ ಕೊಡುತ್ತದೆ. ಈ ಘೋರ ಕರ್ಮ ಸಿದ್ಧಾಂತ, ಜನರ ಆತ್ಮ ವಿಶ್ವಾಸಕ್ಕೆ ಅವರ ಸ್ವಾಭಿಮಾನಕ್ಕೆ ಅಪಾರವಾದ ಹಾನಿಯನ್ನುಂಟುಮಾಡಿದೆ. ಸ್ವಪ್ರಯತ್ನಕ್ಕೆ ಊನವಾಗಿದೆ. ಜನರನ್ನೂ ಅಸಹಾಯಕರನ್ನಾಗಿ ನಿರ್ಬಲರನ್ನಾಗಿ ಮಾಡಿದೆ''. ಇಂತಹ ಅನೇಕ ಯೋಚನೆಗಳು ಲೇಖನಗಳುದ್ದಕ್ಕೂ ಚರ್ಚಿಸಿದ್ದಾರೆ.

**ನೆನಪುಗಳು**

ತೆರೆದ ಮನ ಪುಸ್ತಕದ 'ನೆನಪುಗಳು' ಎಂಬ ವಿಭಾಗದಲ್ಲಿ ಸುಮಾರು ಹತ್ತು ಲೇಖನಗಳಿವೆ. ಈ ಹತ್ತೂ ಲೇಖನಗಳು ಎಚ್.ಎನ್. ಅವರು ಪಿಎಚ್.ಡಿ ಪದವಿಗಾಗಿ, ಸಂದರ್ಶಕ ಪ್ರಾಧ್ಯಾಪಕರಾಗಿ ಅಮೆರಿಕಾಗೆ ಹೋದಾಗ ತಮಗಾದ ಅನುಭವವನ್ನು, ಕಂಡ ಘಟನೆಗಳನ್ನು ಒಳಗೊಂಡಿವೆ.

ಅಮೆರಿಕ ಮತ್ತು ಭಾರತದ ನಡುವೆ ಬೇಕಾದಷ್ಟು ವ್ಯತ್ಯಾಸಗಳಿವೆ. ಮತ್ತು ಮನುಷ್ಯನಿಗಿರಬೇಕಾದ ಮೂಲಭೂತ ಸಂವೇದನೆಗಳ ಹೋಲಿಕೆಯೂ ಇದೆ. ಆರ್ಥಿಕವಾಗಿ, ಸಾಮಾಜಿಕವಾಗಿ, ಶೈಕ್ಷಣಿಕವಾಗಿ ಮತ್ತು ಸಾಂಸ್ಕೃತಿಕವಾಗಿ ಎರಡೂ ದೇಶಗಳ ನಡುವೆ ಮೂಲಭೂತ ವ್ಯತ್ಯಾಸಗಳಿವೆ. ಉಡುಗೆ - ತೊಡುಗೆಗಳಲ್ಲಿ, ಆಚಾರ ವಿಚಾರಗಳಲ್ಲಿ ನಮಗೂ ಅವರಿಗೂ ಅಜಗಜಾಂತರ ವ್ಯತ್ಯಾಸವಿದೆ. ಅಮೆರಿಕದ ಯಾವೊಬ್ಬ ವ್ಯಕ್ತಿಯೂ ಸಾಮಾನ್ಯವಾಗಿ ಖಾದಿ ಪಂಚೆ, ಅಂಗಿ, ಟೋಪಿಗಳನ್ನು ತೊಡಲಾರ ಮತ್ತೂ ಅಪ್ಪಟ ಶಾಖಾಹಾರಿಯಾಗಿಯೂ ಇರಲಾರ ಎನ್ನಬಹುದು. ಹೀಗೆ ಎರಡೂ ದೇಶಗಳ ನಡುವೆ ನಂಬಿಕೆ, ದೈವ, ಆಚರಣೆ, ಬದುಕುವ ಜೀವನ ಕ್ರಮವಲ್ಲಿ ಪರಸ್ಪರ ಭಿನ್ನಾಭಿಪ್ರಾಯಗಳಿವೆ. ಆದರೆ ಎಲ್ಲರೂ ಮನುಷ್ಯರು. ಅಮೆರಿಕದವರಿಗೂ ಹಸಿವಾಗುತ್ತದೆ, ನಿದ್ದೆ ಬೇಕು. ಆಸೆಗಳಿವೆ. ಭಾವನೆಗಳಿವೆ. ಸಂವೇದನೆಗಳಿವೆ. ಇವು ಮಾನವ

ಜನ್ಮಕ್ಕೆ (ಕುಲಕ್ಕೆ) ಸಮಾನವಾಗಿರುವ ಅಂಶ. ಈ ಎರಡೂ ಹಿನ್ನೆಲೆಯಲ್ಲಿ, ಎರಡೂ ದೇಶಗಳ ನಡುವಿನ ಜನರ ಜೀವನ ಶೈಲಿಯನ್ನು ಸಮಿಶ್ರಗೊಳಿಸಿದ ಲೇಖನಗಳಿವೆ ಈ ಭಾಗದಲ್ಲಿ.

ಮೊದಲನೇ ಲೇಖನವಾದ 'ವಿದೇಶದಲ್ಲಿ ಒಬ್ಬ ಸಸ್ಯಹಾರಿ' ಮತ್ತು 'ಹೊಸ ವರ್ಷದ ಅನುಭವ' 'ಅಮೆರಿಕ ಮತ್ತು ಭಾರತದಲ್ಲಿ ವಿದ್ಯಾರ್ಥಿಗಳ ಚಳುವಳಿಗಳು' 'ಅಮೆರಿಕಾದಲ್ಲಿ ವಿದ್ಯಾರ್ಥಿ ನಿಲಯ' ಲೇಖನಗಳು ಅಮೆರಿಕ ಮತ್ತು ನಮ್ಮ ದೇಶದ ನಡುವಿನ ಅನೇಕ ತಾರತಮ್ಯ, ಭಿನ್ನತೆ, ವ್ಯತ್ಯಾಸಗಳನ್ನು ಕುರಿತಂಥವುಗಳು. ಮತ್ತು ಈ ಎರಡೂ ದೇಶದ ಜೀವನ ಶೈಲಿ, ವಿದ್ಯಾರ್ಥಿ ಜೀವನ, ಶಿಕ್ಷಣ ವ್ಯವಸ್ಥೆ ಕುರಿತು ಪರಸ್ಪರ ತೌಲನಿಕ ನೋಟಗಳನ್ನು ನೀಡಿದ್ದಾರೆ. ಅಮೆರಿಕಾದವರಿಂದ ನಾವು ಕಲಿಯಬೇಕಾದ ಶಿಸ್ತು, ವ್ಯವಸ್ಥೆಯ ಬಗ್ಗೆ ಪ್ರಸ್ತಾಪಿಸಿದ್ದಾರೆ. ಉದಾಹರಣೆಗೆ 'ಅಮೆರಿಕ ಮತ್ತು ಭಾರತದಲ್ಲಿ ವಿದ್ಯಾರ್ಥಿ ಚಳುವಳಿಗಳು' ಲೇಖನ ಇದನ್ನು ಇನ್ನೂ ಸ್ಪಷ್ಟ ಪಡಿಸುತ್ತದೆ. ಅಲ್ಲಿನ ಶಿಕ್ಷಣ ಪದ್ಧತಿ, ವಿದ್ಯಾರ್ಥಿಗಳ ಯೋಚನೆ ಮತ್ತು ಸಾಧನೆಗಳನ್ನು ಕುರಿತು ವಿವರಿಸುತ್ತಾರೆ.

ಈ ಲೇಖನಗಳನ್ನು ಬಿಟ್ಟರೆ, ಉಳಿದ ಎಲ್ಲ ಲೇಖನಗಳಲ್ಲಿ ತಾವು ಅಮೆರಿಕಾದಲ್ಲಿದ್ದಾಗ ನಡೆದ ಕೆಲವು ವಿಶೇಷ ಘಟನೆಗಳನ್ನು ನೆನಪುಗಳಲ್ಲಿ ಹಿಡಿದಿಡಲು ಪ್ರಯತ್ನಿಸಿದ್ದಾರೆ. ಇವುಗಳ ಮುಖ್ಯ ಉದ್ದೇಶ ಕೆಲವು ಘಟನೆಗಳನ್ನು ಅಕ್ಷರದಲ್ಲಿ ಹಿಡಿದಿಡುವ ಪ್ರಯತ್ನ ಅಷ್ಟೇಅಲ್ಲ, ಅಮೆರಿಕಾದಲ್ಲಿ ಭಾರತೀಯರ ಜೀವನ ಶೈಲಿ ವ್ಯಕ್ತವಾಗುವ ಸಂದರ್ಭ ಮತ್ತು ಮಾದರಿಯನ್ನು ಹೇಳುತ್ತಾರೆ. ಇವುಗಳ ಮೂಲಕ ವ್ಯಕ್ತವಾಗುವುದು ಯಾವುದೇ ವ್ಯಕ್ತಿ ತಾನು ಬೆಳೆದ ಪರಿಸರದ ಸಾಂಸ್ಕೃತಿಕ ಜಗತ್ತಿನಿಂದ ಅಷ್ಟು ಸುಲಭವಾಗಿ ಬಿಡುಗಡೆ ಹೊಂದಲು ಸಾಧ್ಯವೇ ಇಲ್ಲ. ಎರಡು ಸಂಸ್ಕೃತಿಗಳ ನಡುವಿನ ಸಂಕ್ರಮಣ ಸ್ಥಿತಿ ಹೇಗಿರುತ್ತದೆ ಎನ್ನುವುದು ಇಲ್ಲಿ ಅಭಿವ್ಯಕ್ತಿಗೊಳ್ಳುತ್ತದೆ. ಹೇಗೆಂದರೆ ಭಾರತೀಯನಾದ ಒಬ್ಬ ವ್ಯಕ್ತಿ ತಾನು ಬೆಳೆದ, ಹುಟ್ಟಿದ, ತನ್ನನ್ನು ರೂಪಿಸಿದ ಸಮಾಜದ ಛಾಯೆಗಳು ಇದ್ದಕ್ಕಿದಂತೆ ಮಾಯವಾಗಲಾರವು. ಆದರೆ ಕ್ರಮೇಣವಾಗಿ ಮಾಯವಾಗುತ್ತಲೂ ಇರುತ್ತವೆ. ಇದು ಎರಡು ಸಂಸ್ಕೃತಿಗಳ ನಡುವಿನ ಸಾಂಸ್ಕೃತಿಕ ಸಂಘರ್ಷದ ಸಂಕ್ರಮಣ ಸ್ಥಿತಿ. ತಾನು ದಿನ ನಿತ್ಯ ಹೊರಗೆ ಬದುಕುವ ಶೈಲಿ ಒಂದೆಡೆ, ತಾನು ರೂಪಗೊಂಡ, ತನ್ನನ್ನು ರೂಪಿಸಿದ ಸಮಾಜ ಮತ್ತೊಂದು ಕಡೆ ಈತನನ್ನು ಎಳೆಯುತ್ತಿರುತ್ತವೆ - ಎನ್ನುವುದನ್ನು ಹೇಳುವಲ್ಲಿ ''ಮಾಂಟ್ರಿಯಲ್‌ನಲ್ಲಿ ನಾಮಕರಣ......'' ಲೇಖನ ಒಂದು ಅತ್ಯುತ್ತಮ ಉದಾಹರಣೆ. ಇಂಥ ವ್ಯಕ್ತಿಗಳಿಗೆ ತಮ್ಮದನ್ನು ಸಂಪೂರ್ಣವಾಗಿ ಬಿಡಲೂ ಆಗದೆ, ಅಮೆರಿಕನ್ನರ ಸಂಸ್ಕೃತಿಯನ್ನು ಸಂಪೂರ್ಣವಾಗಿ ಅಳವಡಿಸಿಕೊಳ್ಳಲೂ ಆಗದೆ ಎರಡೂ ಸಂಸ್ಕೃತಿಯ ಪ್ರತಿನಿಧಿಗಳಾಗಿ, ಕಲಬೆರಕೆ ಸಂಸ್ಕೃತಿಯವರಾಗಿ ವ್ಯಕ್ತವಾಗುತ್ತಾರೆ ಎನ್ನುವುದು ಈ ಲೇಖನದ ಮೂಲಕ ತಿಳಿದು ಬರುತ್ತದೆ. ಮಗುವಿನ ನಾಮಕರಣ ಮಾಡುವಾಗ ಸತ್ಯನಾರಾಯಣ ಪೂಜೆ, ಸ್ತೋತ್ರಗಳ ಪಠನ ಭಾರತೀಯವುಗಳಾದರೆ, ಊಟಕ್ಕೆ ಮಾಂಸಹಾರಿ ಊಟ, ದಿನ ನಿತ್ಯದ ಬದುಕುವ ಶೈಲಿ ಅಮೆರಿಕನ್ನವು.

ಭಾರತದಲ್ಲಿನ ವೇದೋಪನಿಷತ್ತುಗಳು ಜಗತ್ತಿನ ಅನೇಕ ಮಹನಿಯರನ್ನೂ ಚಕಿತಗೊಳಿಸಿವೆ, ಆಸಕ್ತಿ ಮೂಡಿಸಿವೆ. ತಮ್ಮೆಡೆಗೆ ಆಕರ್ಷಿಸಿವೆ. ಅಮೆರಿಕಾದಲ್ಲಿ ವೇದಾಂತ ಪ್ರಚಾರ ನಡೆಸಿದ ಮೊದಲಿಗರು ಸ್ವಾಮಿ ವಿವೇಕಾನಂದರು. ಅಂದಿನಿಂದಲೇ ಅಮೆರಿಕದ ಅನೇಕರಲ್ಲಿ ನಮ್ಮ ವೇದಗಳ ಬಗೆಗೆ, ಉಪನಿಷತ್ತುಗಳ ಬಗೆಗೆ ಕುತೂಹಲ ಮೂಡಿಸಿದರು. ಆ ಪರಿಣಾಮದಿಂದ ಇಂದು ಅಮೆರಿಕಾ ದೇಶದಲ್ಲಿ ಅನೇಕ ವೇದಾಂತ ಕೇಂದ್ರಗಳಿವೆ, ರಾಮಕೃಷ್ಣ ಆಶ್ರಮಗಳಿವೆ, ಮಠಗಳಿವೆ. ಇದರ ಫಲವಾಗಿ ಅನೇಕ ಅಮೆರಿಕನ್ನರು ಜುಟ್ಟು ಬಿಟ್ಟು ಸ್ವಾಮೀಜಿಗಳಂತೆ ಬದುಕಲು ಪ್ರಭಾವಿಸಿವೆ. ಅನೇಕರು ವೇದಗಳನ್ನು, ಪುರಾಣಗಳನ್ನು ಆಳವಾಗಿ ಅಧ್ಯಯನ ಮಾಡಿದ್ದಾರೆ.

ಭಾರತೀಯರು ಅಮೆರಿಕನ್ನರ, ಪರದೇಶಗಳ ಜೀವನ ಶೈಲಿಗೆ ಆಕರ್ಷಣೆಗೊಳ್ಳುವುದು ಸಹಜ. ಹಾಗೆಯೇ ಅಮೆರಿಕನ್ನರು, ಪಾಶ್ಚಿಮಾತ್ಯರು ನಮ್ಮ ಸಾಂಸ್ಕೃತಿಕ ಜೀವನ ಮಾದರಿಗೆ ಆಕರ್ಷಣೆಗೊಳ್ಳುವುದು ಸಹಜ. ಇಂಥ ಆಕರ್ಷಣೆಗಳು ಯಾವತ್ತೂ ಏಕಮುಖವಾಗಿ ನಡೆದಂತೆ ಕಂಡರೂ ಅವು ದ್ವಿಮುಖವಾಗಿಯೇ ಇರುತ್ತವೆ. ಇದಕ್ಕೆ 'ಕ್ಯಾಲಿಫೋರ್ನಿಯಾದಲ್ಲಿ ವೇದಾಂತ' 'ಶ್ರೀರಾಮಕೃಷ್ಣ ಪರಮಹಂಸರ ಜನ್ಮದಿನೋತ್ಸವ' 'ಚಿಕಾಗೋದಲ್ಲಿ ವಿವೇಕಾನಂದರ ಜಯಂತಿ' 'ಮಾಂಟ್ರಿಯಲ್‌ನಲ್ಲಿ ಶ್ರೀ ರಾಧಕೃಷ್ಣ ಮಂದಿರ' ಉತ್ತಮ ನಿದರ್ಶನ ನೀಡುತ್ತವೆ. ಮನುಷ್ಯನನ್ನು ಆಕರ್ಷಿಸಬಲ್ಲ ಕಲೆ ಎಲ್ಲ ಕಡೆಗೂ ಇವೆ. ಇವು ಮನುಷ್ಯನ ಮಾನಸಿಕ ಸ್ಥಿಮಿತತೆ ಕಾಪಾಡುತ್ತಿರುತ್ತವೆ. ಇವುಗಳಿಗೆ ಭಾಷೆಯ ಅಗತ್ಯತೆ ಇರುವುದು ಬಹಳ ಕಡಿಮೆ. ಸಂಗೀತ, ನೃತ್ಯ, ನಾಟಕ ಯಾವುದೇ ಭಾಷೆಯ ಮನುಷ್ಯನನ್ನು ತನ್ನಡೆಗೆ ಎಳೆಯುವ ಶಕ್ತಿ ಪಡೆದುಕೊಂಡಿರುತ್ತವೆ. ಇದನ್ನು ನಿದರ್ಶನ ಪಡಿಸುವ ಲೇಖನ 'ಭಾರತದ ಬಗೆಗೆ ಗೌರವ ಮೂಡಿಸಿದ ರವಿಶಂಕರ್ ಸಿತಾರವಾದನ'.

ಹೀಗೆ ಈ ಭಾಗದ ಲೇಖನಗಳಲ್ಲಿ ಮೇಲುನೋಟಕ್ಕೆ ಎಚ್.ಎನ್. ಅವರು ಅಮೆರಿಕಾದಲ್ಲಿದ್ದಾಗ ನಡೆದ ಕೆಲವು ಘಟನೆಗಳನ್ನು ವಿವರಿಸಿದ್ದಾರೆ ಎಂದರೂ ಅವುಗಳ ಅಂತರಾಳದಲ್ಲಿ ಎರಡು ಸಂಸ್ಕೃತಿಗಳ ನಡುವಿನ ಸಾಂಸ್ಕೃತಿಕ ಜಗತ್ತಿನ ಘರ್ಷಣೆಯ, ಒಂದನ್ನೊಂದು ಒಪ್ಪಿಕೊಳ್ಳುವ, ಛೇದಿಸುವ ಸಂಕ್ರಮಣ ಸ್ಥಿತಿಯನ್ನು ಓದುಗನಿಗೆ ನೀಡುತ್ತವೆ.

## ಲಲಿತ ಪ್ರಬಂಧಗಳು

ಡಾ. ಎಚ್. ನರಸಿಂಹಯ್ಯನವರು ಶ್ರೇಷ್ಠ ಶಿಕ್ಷಣ ತಜ್ಞರು, ಗಂಭೀರ ಚಿಂತನಕಾರರು ಆಗಿರುವುದರ ಜೊತೆಗೆ ಹಾಸ್ಯಭರಿತ ಲಲಿತಪ್ರಬಂಧಕಾರರೂ ಹೌದು. 'ತೆರೆದ ಮನ'ದಲ್ಲಿ ಇರುವ ಎಂಟು ಲೇಖನಗಳು ಈ ಮಾದರಿಯವು. ಓದಲು ಈ ಲೇಖನಗಳು ಹಾಸ್ಯಮಯ ಬರವಣಿಗೆಯಂತೆ ಕಂಡರೂ ಆಳದಲ್ಲಿ ಗಂಭೀರ ಚಿಂತನೆಗಳಿವೆ. ಸಮಾಜದ ಜನತೆಯ ಯೋಚನೆ ಮೇಲೆ ತೀವ್ರವಾಗಿ ವೈಜ್ಞಾನಿಕ ಪ್ರಭಾವ ಬೀರುವ ಛಾಯೆಗಳಿವೆ. ಸಮಾಜದ ಅಸ್ತವ್ಯಸ್ತ ರೂಪುರೇಷೆಗಳ ಬಗೆಗಿನ ತಳಮಳ, ನೋವು, ಅನುಕಂಪದ

ಏಳಿಗಳು ಈ ಲೇಖನಗಳಲ್ಲಡಗಿದೆ. ಸಮಾಜದ, ಜನರ ಮನದಲ್ಲಿ ಗಟ್ಟಿಯಾಗಿ ನೆಲೆಯೂರಿ ನಿಂತ ಮೂಢನಂಬಿಕೆಗಳ ಬಗೆಗಿನ ಅಸಮಧಾನವಿದೆ. ಅವುಗಳನ್ನು ಛೇಡಿಸುವ ಮತ್ತು ಸಾಧ್ಯವಾದಷ್ಟು ಮಾರ್ಪಡಿಸುವ ಕಾರ್ಯಪ್ರವೃತಿಯ ಮನಸ್ಸಿದೆ.

ಎಚ್.ಎನ್. ಅವರ ಎಲ್ಲ ಲೇಖನಗಳಲ್ಲೂ ಇಂಥ ಗಂಭೀರ ಚಿಂತನೆ, ವೈಚಾರಿಕ ಪ್ರಜ್ಞೆ ತುಂಬಿದ್ದರೂ ಅವುಗಳನ್ನು ವ್ಯಕ್ತಪಡಿಸುವ ವಿಧಾನ ಹಾಸ್ಯಾತ್ಮಕವಾಗಿ. ಅವರೇ ತಮ್ಮ ಕೆಲವು ಲೇಖನಗಳಲ್ಲಿ, ಸಂದರ್ಶನಗಳಲ್ಲಿ ಹೇಳುವಂತೆ ಹಾಸ್ಯಾತ್ಮಕತೆ ಮನುಷ್ಯನಿಗೆ ಬಹಳ ಮುಖ್ಯ. ಹಾಸ್ಯದ ಮಾತುಗಳಿಂದ ಜನಸಾಮಾನ್ಯರಿಗೂ ಬಹಳ ಬೇಗ ತಮ್ಮ ಉದ್ದೇಶಗಳನ್ನು, ಯೋಚನೆಗಳನ್ನು ತಲುಪಿಸಬಹುದು ಎಂದು ನಂಬಿದವರು. ಮತ್ತು ಹಾಸ್ಯಭರಿತ ಭಾಷಣಗಳಿಂದ, ಲೇಖನಗಳಿಂದ ತಮ್ಮ ಅನೇಕ ಚಿಂತನೆಗಳನ್ನು ಜನರಿಗೆ ತಲುಪಿಸುವಲ್ಲಿ ಸಾಕಷ್ಟು ಯಶಸ್ವಿ ಕೂಡ ಆಗಿದ್ದಾರೆ.

ಕ್ರಿಕೆಟ್ ಇಂದು ಜಗತ್ಪ್ರಸಿದ್ಧ ಆಟಗಳಲ್ಲಿ ಒಂದು. ಪ್ರತಿ ವರ್ಷ ಈ ಆಟಕ್ಕಾಗಿ ದೇಶಗಳು ಕೋಟಿಗಟ್ಟಲೆ ಹಣ ಖರ್ಚು ಮಾಡುತ್ತಿವೆ. ಈ ಆಟ ನೋಡಲು ಲಕ್ಷ ಲಕ್ಷ ಜನರು ತಮ್ಮ ಕೆಲಸ ಕಾರ್ಯಗಳೆಲ್ಲ ಬಿಟ್ಟು ದಿನವಿಡಿ ಕಳೆಯುತ್ತಾರೆ. ಕ್ರಿಕೆಟ್ ಎಂದರೆ ಸಾಮಾನ್ಯವಾಗಿ ಎಲ್ಲರಿಗೂ ಇಷ್ಟ. ಆದರೆ ಇದುವರೆಗೆ ಕ್ರಿಕೆಟ್‌ಗೂ ದೇಶದ ಅಭಿವೃದ್ಧಿಗೂ ಸಂಬಂಧ ಕಲ್ಪಿಸಿ ಯೋಚನೆ ಮಾಡಿದವರು ಯಾರೂ ಇರಲಿಕ್ಕಿಲ್ಲ. ನರಸಿಂಹಯ್ಯನವರು 'ಕ್ರಿಕೆಟ್ ಮತ್ತು ಕ್ರಾಂತಿ' ಲೇಖನದಲ್ಲಿ ಈ ಬಗೆಗಿನ ಗಂಭೀರ ಯೋಚನೆಗಳಿವೆ. ಎಲ್ಲೋ ನಡೆಯುವ ಆಟದಿಂದ ಇಡೀ ದೇಶದ ಕೆಲಸಗಳು ಹೇಗೆ ಸ್ಥಗಿತವಾಗುತ್ತವೆ. ಶಾಲಾ ಕಾಲೇಜುಗಳಲ್ಲಿ ಶಿಕ್ಷಕ ಉಪನ್ಯಾಸಕ್ಕೆ ಬೆಲೆ ಇಲ್ಲದಂತಾಗುತ್ತದೆ. ಇದರ ಪ್ರತಿಫಲವಾಗಿ ದೇಶದ ಅಭಿವೃದ್ಧಿಗೆ ಹೇಗೆ ಮಾರಕವಾಗಿ ನಿಲ್ಲುತ್ತದೆ ಈ ಆಟ. ಇದನ್ನು ಹಾಸ್ಯಮಯವಾಗಿ ಓದುಗನಿಗೆ ಮನಮುಟ್ಟುವಂತೆ ಹೇಳುತ್ತಾರೆ.

ಗಾಂಧಿ ಮುಂತಾದ ಮಹನಿಯರು ಶಿಕ್ಷಣ ಮಾಧ್ಯಮದಲ್ಲಿ ತಮ್ಮ ಮಾತೃ ಭಾಷೆಗೆ ಮೊದಲ ಆದ್ಯತೆ ಕೊಡಬೇಕೆಂದು ಹೇಳಿದರು. ಈಗಲೂ ಅಂಥ ಮಾತುಗಳು, ಭಾಷಣಗಳು, ಲೇಖನಗಳು ಕೇಳಿ, ಕಂಡುಬರುತ್ತವೆ. ಆದರೆ ಇಂಗ್ಲಿಷ್ ಮಾಧ್ಯಮದ ಹಾವಳಿ ತಪ್ಪಿಲ್ಲ. ಈ ಬಗೆಯಲ್ಲಿ ಮಾತನಾಡುವವರ ಮಕ್ಕಳೇ ಇಂಗ್ಲಿಷ್ ಮಾಧ್ಯಮದಲ್ಲಿ ಓದುತ್ತಿರುತ್ತಾರೆ. ಅದೊಂದು ದೊಡ್ಡ ವಿಪರ್ಯಾಸ. ಇದಕ್ಕೆ ಮೂಲಭೂತ ಕಾರಣ ಏನಿರಬಹುದು ಎನ್ನುವುದು ಎಚ್.ಎನ್. ಅವರು ಅನೇಕ ಲೇಖನಗಳಲ್ಲಿ ವಿವರಿಸಿದ್ದಾರೆ. ಉದಾಹರಣೆಗೆ 'ಮುಂಜಾನೆಯ ಲಾಲ್‌ಬಾಗ್' ಲಲಿತ ಪ್ರಬಂಧದಲ್ಲಿ ಇದನ್ನು ಹೇಳುವ ವಿಧಾನ ಹಾಸ್ಯಮಯದ್ದು, ಒಳಗಿನ ಅಂತರದ ಯೋಚನೆ ಬಹಳ ಗಂಭೀರವಾದುದು.

ಇಂದು ರಾಜ್ಯದ ತುಂಬೆಲ್ಲ ಇಂಗ್ಲಿಷ್ ಮಾಧ್ಯಮದ ಕಾನ್ವೆಂಟ್‌ಗಳು ನಾಯಿಕೊಡೆಯಂತೆ ನಗರದ ಓಣಿ ಓಣಿಗಳಲ್ಲಿ, ಪಟ್ಟಣಗಳಲ್ಲಿ ಹಳ್ಳಿಗಳಲ್ಲೂ ಕೂಡ ತಲೆಯೆತ್ತುತ್ತಿವೆ. ಇದಕ್ಕೆ ಕಾರಣ ಇಂಗ್ಲಿಷ್ ಬಗೆಗಿನ ನಮ್ಮವರ ಅತಿಯಾದ ವ್ಯಾಮೋಹ

ಎಂತಲೇ ಎಚ್. ಎನ್. ಹೇಳುತ್ತಾರೆ. ಇದಕ್ಕೆ ತಕ್ಕ ಉದಾಹರಣೆಯಾಗಿ 'ಮುಂಜಾನೆಯ ಲಾಲ್‌ಬಾಗ್' ಪ್ರಬಂಧದ ಈ ಭಾಗವನ್ನು ನೋಡಬಹುದು. '' ಹಲವು ಮಂದಿ ತಮ್ಮ ನಾಯಿಗಳೊಂದಿಗೆ ಲಾಲ್‌ಬಾಗಿಗೆ ಬರುತ್ತಾರೆ. ಅವರು ತಮ್ಮ ನಾಯಿಗಳೊಂದಿಗೆ ಇಂಗ್ಲೀಷ್ ಮೀಡಿಯಂನಲ್ಲಿಯೇ ಮಾತನಾಡುತ್ತಾರೆ. ಲಾಲ್‌ಬಾಗ್‌ಗೆ ಬರುವ ಬಹುತೇಕ ನಾಯಿಗಳು ಇಂಗ್ಲಿಷ್ ಮೀಡಿಯಂ ನಾಯಿಗಳೇ. ಇಲ್ಲಿಯತನಕ ಎರಡು ತೆಲಗು ಮೀಡಿಯಂ, ಒಂದು ಹಿಂದಿ ಮೀಡಿಯಂ ನಾಯಿ ನನ್ನ ಗಮನಕ್ಕೆ ಬಂದಿವೆ. ಕನ್ನಡ ಮೀಡಿಯಂ ನಾಯಿ ಈ ೨೭ ವರ್ಷಗಳಲ್ಲಿ ನನಗೆ ಸಿಕ್ಕಿಯೇ ಇಲ್ಲ !'' ಇಂಥ ಅನೇಕ ಉದಾಹರಣೆಗಳು ತಮ್ಮ ಅನೇಕ ಪ್ರಬಂಧಗಳಲ್ಲಿ ಅಲ್ಲಲ್ಲಿ ಪ್ರಸ್ತಾಪಿಸುತ್ತಾರೆ. ನಮ್ಮ ಜನರು ಸಾಮಾನ್ಯವಾಗಿ ಮೇಲುವರ್ಗದ ಜನರನ್ನು ಅನುಕರಿಸುತ್ತಾರೆ. ಆ ಮೇಲು ವರ್ಗದ ಜನ ಅಮೆರಿಕಾ, ಇಂಗ್ಲೆಂಡಿನ ಜನರನ್ನು ಅನುಕರಿಸುತ್ತಾರೆ. ಇಂಗ್ಲಿಷ್ ಮೀಡಿಯಂನಲ್ಲಿ ಓದಿದರೆ ಬೇಗನೆ ಅಮೆರಿಕ, ಇಂಗ್ಲೆಂಡನಂಥ ಪಾಶ್ಚಾತ್ಯ ರಾಷ್ಟ್ರಗಳಿಗೆ ಹೋಗಬಹುದು ಎನ್ನುವ ಆಸೆ. ಅದರ ಜೊತೆಗೆ ಪ್ರತಿಷ್ಠೆಯ ಮಾತಾಗಿದೆ. ಜನರಲ್ಲಿ ಬೇರೂರಿದ ಇಂಥ ಮನೋಭಾವವನ್ನು ಸೂಕ್ಷ್ಮವಾಗಿ ಅಭಿವ್ಯಕ್ತಗೊಳಿಸಿದ್ದಾರೆ.

ದೇಶದ ಸಾಮಾಜಿಕ ವ್ಯವಸ್ಥೆ ಎಷ್ಟರ ಮಟ್ಟಿಗೆ ಹದಗೆಟ್ಟು ಹೋಗಿದೆ ಎನ್ನುವುದನ್ನು ದಿನನಿತ್ಯ ಕಂಡು, ಅನುಭವಿಸಿ ತಿಳಿದಿದ್ದೇವೆ. ಸಾರಿಗೆ, ಅಂಚೆ ವ್ಯವಸ್ಥೆಯಲ್ಲಿನ ವಿಳಂಬ, ನೌಕರರ ಉದಾಸೀನ, ಕೆಲಸದಲ್ಲಿನ ಆಲಸ್ಯಗಳನ್ನು ಪ್ರತಿನಿಧಿಸುವ ಲೇಖನಗಳೂ ಕೂಡ ಅನೇಕ ಇವೆ. ''ಮನಿಯಾರ್ಡರ್ ತಲುಪಲಿಲ್ಲ', 'ಕಳೆ ಇಲ್ಲದ ಶವ' 'ಆಟೋರಿಕ್ಷಾ ಅನುಭವಗಳು' '' ಲೇಖನಗಳಲ್ಲಿ ನವಿರಾದ ಹಾಸ್ಯ ತುಂಬಿ, ಹದಗೆಟ್ಟ ವ್ಯವಸ್ಥೆಯ ಬಗೆಗೆ ಮಾಡುವ ಲೇವಡಿತನ ಇದೆ. ಚಿಂತನೆ ಇದೆ. ಇದನ್ನು ಗಂಭೀರವಾಗಿ ಹೇಳದೆ ಹಾಸ್ಯಪೂರ್ಣವಾಗಿ ಹೇಳುತ್ತಾರೆ. ಮೇಲುನೋಟಕ್ಕೆ ಹಾಸ್ಯಕ್ಕಾಗಿ ಬರೆದ ಪ್ರಬಂಧಗಳೆಂದರೂ ಅವುಗಳ ಅಂತರಾಳದಲ್ಲಿ ಇಂಥ ಗಂಭೀರ ಚಿಂತನೆಗಳಿವೆ. ಅವು ಓದುಗನನ್ನು ಆತನಿಗೆ ಗೊತ್ತಿಲ್ಲದಂತೆ ಆವರಿಸಿ ಬಿಡುತ್ತವೆ ನಿಧಾನವಾಗಿ.

ಇಪ್ಪತ್ತೆರಡನೇ ಶತಮಾನಕ್ಕೆ ಪಾದಾರ್ಪಣೆ ಮಾಡುತ್ತಿರುವ ನಾವು ವಿಜ್ಞಾನ ತಂತ್ರಜ್ಞಾನದಲ್ಲಿ ಸಾಕಷ್ಟು ಪ್ರಗತಿ ಹೊಂದಿದ್ದೇವೆ. ವಿಜ್ಞಾನ ತಂತ್ರಜ್ಞಾನದ ಸಹಾಯವಿಲ್ಲದೆ ಒಂದು ದಿನ ಕೂಡ ಬದುಕಲು ಸಾಧ್ಯವಿಲ್ಲ ಎನುವಷ್ಟರ ಮಟ್ಟಿಗೆ ಅದರ ಮೇಲೆ ಅವಲಂಬಿತರಾಗಿದ್ದೇವೆ. ಆದರೂ ನಮ್ಮ ಜನರಲ್ಲಿ ಮನೆಮಾಡಿ ನಿಂತ ನಂಬಿಕೆಗಳು, ಆಚರಣೆಗಳು ನಮ್ಮನ್ನೂ ತನ್ನ ಕಪಿಮುಷ್ಟಿಯಿಂದ ಬಿಟ್ಟಿಲ್ಲ. ಪ್ರಪಂಚದ ಕೆಲವೇ ದೊಡ್ಡ ರಾಷ್ಟ್ರಗಳಲ್ಲಿ ಭಾರತವೂ ಒಂದು. ಮತ್ತು ಮುಂದುವರಿದ, ಮುಂದುವರಿಯುತ್ತಿರುವ ಕೆಲವೇ ದೇಶಗಳಲ್ಲಿ ಭಾರತ ಕೂಡ ಒಂದು. ಆದರೆ ಭಾರತದಲ್ಲಿರುವಷ್ಟು ನಂಬಿಕೆಗಳು, ಆಚರಣೆಗಳು, ಮಠಗಳು, ಆಶ್ರಮಗಳು, ಬೇರಾವ ದೇಶದಲ್ಲೂ ಇಲ್ಲ. ಇದಕ್ಕೆ ಮೂಲಭೂತ ಕಾರಣ ಏನಿರಬಹುದು ಎಂಬ ಚರ್ಚೆ ಕೂಡ ಮಾಡುತ್ತಾರೆ. ಅದಕ್ಕೆ ತಮ್ಮ ಕೆಲವು ಲೇಖನಗಳಲ್ಲಿ ಕಾರಣಗಳನ್ನು ಹೇಳುತ್ತಾರೆ. ನಮ್ಮ ಶಿಕ್ಷಣ ವ್ಯವಸ್ಥೆಯಲ್ಲಿನ ಗೊಂದಲಗಳು, ಶಿಕ್ಷಕರಲ್ಲಿನ ಗೊಂದಲತನ ಇದಕ್ಕೆ ಮುಖ್ಯ

ಕಾರಣ ಎಂತಲೂ ಹೇಳುತ್ತಾರೆ. ನಮ್ಮಲ್ಲಿರುವ ಅನೇಕ ಜನ ಶಿಕ್ಷಕರು (ವಿಜ್ಞಾನದ ಶಿಕ್ಷಕರು) ತರಗತಿಯಲ್ಲಿನ ಅವರ ಬೋಧನೆಗೂ, ತಮ್ಮ ಬದುಕಿಗೂ ಸಂಬಂಧವೇ ಇಲ್ಲದಂತೆ ಬದುಕುತ್ತಿದ್ದಾರೆ. ಶಾಲಾ, ಕಾಲೇಜಿನ ಶಿಕ್ಷಕರ ಸಾಮಾಜಿಕ ಜೀವನ ಈ ರೀತಿಯ ನಂಬಿಕೆ ಆಚರಣೆಗಳಿಂದ ಕೂಡಿದ್ದಾಗಿರುತ್ತದೆ. ಇದು ಮೊದಲು ತಪ್ಪಬೇಕು ಎನ್ನುವುದು ಎಚ್.ಎನ್. ಅವರ ವಾದ. ''ಪುನರ್ಜನ್ಮ, ಸಾವು, ನನ್ನ ಸಾವು'', ''ಅಯ್ಯೋ ಬೂದುಕುಂಬಳಕಾಯಿಯೇ'', ''ಅಯ್ಯೋ ಗಣೇಶ'' ಮುಂತಾದ ಪ್ರಬಂಧಗಳು ಈ ವಿಷಯ ಕುರಿತು ಚರ್ಚಿಸುತ್ತವೆ.

ಈ ಬರವಣಿಗೆಗಳನ್ನು ಬಿಟ್ಟರೆ ನರಸಿಂಹಯ್ಯನವರ ''ಡಾ. ಎಚ್.ಎನ್. ಹಿನ್ನೋಟ'' ಜೀವನ - ಚಿತ್ರ ಸರಣಿ ಲೇಖನಗಳು ಸುಧಾ ಪತ್ರಿಕೆಯಲ್ಲಿ ಪ್ರಕಟವಾಗಿವೆ. ಈ ಲೇಖನ ಮಾಲೆ ಹಿಂದೆ ಬರೆದ ಲೇಖನಗಳ ಸಾರವೇ ಆಗಿರುವುದರಿಂದ ಇಲ್ಲಿ ವಿಶೇಷವಾಗಿ ಚರ್ಚಿಸಲಾಗಿಲ್ಲ.

# ಅನುಬಂಧ

೧. ನರಸಿಂಹಯ್ಯ. ಎಚ್.೧೯೯೩: 'ತೆರೆದ ಮನ': ಬೆಂಗಳೂರು, ಕನ್ನಡ ಸಂಘ ಕ್ರೈಸ್ಟ್ ಕಾಲೇಜು

೨. ನರಸಿಂಹಯ್ಯ. ಎಚ್.೧೯೯೩: 'ಕ್ವಿಟ್ ಇಂಡಿಯಾ' ಮತ್ತು 'ಮೈಸೂರು ಚಲೊ' ಚಳುವಳಿಗಳಲ್ಲಿ ನನ್ನ ಅನುಭವಗಳು: ಬೆಂಗಳೂರು, ನ್ಯಾಷನಲ್ ಕಾಲೇಜು.

೩. ನರಸಿಂಹಯ್ಯ. ಎಚ್.೧೯೯೨: ನ್ಯಾಷನಲ್ ಹೈಸ್ಕೂಲಿನ ಸ್ಮರಣ ಸಂಚಿಕೆ: ಬೆಂಗಳೂರು, ನ್ಯಾಷನಲ್ ಕಾಲೇಜು.

೪. ನರಸಿಂಹಯ್ಯ. ಎಚ್.೧೯೯೪: ಡಾ. ಎಚ್. ಎನ್. ಹಿನ್ನೋಟ (ಸುಧಾ ವಾರ ಪತ್ರಿಕೆ) ಜುಲೈ ೧೬ -೧೯೯೪ ರಿಂದ ೧೧ ಸೆಪ್ಟೆಂಬರ್ ೧೯೯೪ರ ವರೆಗೆ ೯ ಸಂಪುಟಗಳು.

೫. ದಕ್ಷಿಣಾ ಮೂರ್ತಿ ಬಿ. ವಿ. ೧೯೯೨: ಡಾ. ಎಚ್. ನರಸಿಂಹಯ್ಯನವರು. ನ್ಯಾಷನಲ್ ಹೈಸ್ಕೂಲಿನ ಅಮೃತ ಮಹೋತ್ಸವದ ಸ್ಮರಣ ಸಂಚಿಕೆ, ನ್ಯಾಷನಲ್ ಹೈಸ್ಕೂಲು, ಬೆಂಗಳೂರು.

೬. ಬೋರಲಿಂಗಯ್ಯ. ಹಿ. ಚಿ. ೧೯೯೨ ಕನ್ನಡ ವಾರ್ಷಿಕ(ಲೇ) ಹಂಪಿ ಕನ್ನಡ ವಿಶ್ವವಿದ್ಯಾಲಯ

ಹಂಪಿಯ ಕನ್ನಡ ವಿಶ್ವವಿದ್ಯಾಲಯ ವಿದ್ಯೆಯನ್ನು ಕಲಿಯಲು ಅನುವು ಮಾಡಿಕೊಡುವ ಒಂದು ಸಂಸ್ಥೆಯೇ ಹೊರತು ಅದು ವಿದ್ಯೆಯನ್ನು ಕಲಿಸುವ ಸಂಸ್ಥೆಯಲ್ಲ. ನಮ್ಮ ನಾಡಿನಲ್ಲಿ ಹಳೆಯ ಕಾಲದ ತಿಳುವಳಿಕೆಯೊಂದಿದೆ. ಅಲ್ಲದೆ ಪಶ್ಚಿಮದಿಂದ ಹರಿದು ಬರುತ್ತಿರುವ ಜ್ಞಾನ ಪ್ರವಾಹವೂ ಇದೆ. ಈ ಎರಡೂ ತಿಳುವಳಿಕೆಗಳು ಒಂದಕ್ಕೊಂದು ಸಂಧಿಸಿ ಬೆಳಕನ್ನು ಉಂಟುಮಾಡಿವೆ. ಜೊತೆಗೆ ದಿಗ್ಭ್ರಮೆಯನ್ನೂ ತಂದಿವೆ. ಈ ತಿಳುವಳಿಕೆಗಳ ವಿವೇಕದ ವಿನಿಯೋಗ ಇಂದು ಅಗತ್ಯವಾಗಿದೆ. ಇಂಥ ವಿನಿಯೋಗಕ್ಕಾಗಿ ಹೊಸ ಬಗೆಯ ಶಾಸ್ತ್ರ ವಿಧಾನಗಳು ನಮಗಿಂದು ಬೇಕಾಗಿವೆ. ಕನ್ನಡ ವಿಶ್ವವಿದ್ಯಾಲಯದಲ್ಲಿ ನಡೆಯುತ್ತಿರುವ ಸಂಶೋಧನೆಯ ಗುರಿಯೆಂದರೆ ಈ ಶಾಸ್ತ್ರ ವಿಧಾನಗಳ ನಿರ್ಮಾಣ.

ನಾವು ನಮ್ಮ ನಮ್ಮಲ್ಲಿ ವಿಚಾರ ವಿನಿಮಯ ನಡೆಸಲು, ಒಬ್ಬರ ಅರಿವನ್ನು ಎಲ್ಲರೂ ಹಂಚಿಕೊಳ್ಳಲು ವಿಶ್ವವಿದ್ಯಾಲಯದಲ್ಲಿ ಪ್ರತಿವಾರ ಮಂಟಪ ಎಂಬ ಕಾರ್ಯಕ್ರಮ ನಡೆಸುತ್ತೇವೆ. ಅಲ್ಲಿ ಹೊಮ್ಮಿದ ವಿಚಾರಗಳು ನಮ್ಮ ಅರಿವನ್ನು ಹೆಚ್ಚಿಸಿದಂತೆ ನಿಮಗೂ ಲಾಭದಾಯಕವಾಗುವವೆಂಬ ನಂಬಿಕೆಯಿಂದ ಪುಸ್ತಿಕೆಗಳ ರೂಪದಲ್ಲಿ ಅವನ್ನು ಪ್ರಕಟಿಸಿ ನಿಮ್ಮ ಕೈಗಿಡುತ್ತಿದ್ದೇವೆ.

**ಚಂದ್ರಶೇಖರ ಕಂಬಾರ**
ಕುಲಪತಿಗಳು